# ಮಾನಪ್ಪನವರ ಇತರ ಕೃತಿಗಳು

| | | | ಬೆಲೆ. ರೂ. | | |
|---|---|---|---|---|---|
| ತ್ರಿವೇಣಿ—ಮೂರು ಕಥೆಗಳು | .... | .... | ೧ | ೬ | ೦ |
| ಕವಿ ಸತ್ಯನಾರಾಯಣ—ಜೀವನಕಥೆ .... | | .... | ೧ | ४ | ೦ |
| ಗಂಟಲಲ್ಲಿ ಗಾಳ....ಸಣ್ಣಕಥೆಗಳು | .... | .... | ೧ | ೧४ | ೦ |
| ಕತ್ತಲೆಗಿರಿ—ಸಣ್ಣ ಕಥೆಗಳು | .... | .... | ೧ | ೨ | ೦ |

---

## ಕುರುಡು ಓದು

ಈಗಿನ ವಿದ್ಯಾಭ್ಯಾಸದ ಬರೀ ಕುರುಡು ಓದಿನಿಂದ ಯಾವ ಪ್ರಯೋಜನವೂ ಇಲ್ಲ, ಅದರೊಂದಿಗೆ ತನ್ನ ಸ್ವಂತ ಹೃದಯ ವಿಕಾಸಗೊಳಿಸುವ ಬುದ್ಧಿ ಮತ್ತು ಕೃತಿ ಅಗತ್ಯವೆಂಬುದನ್ನು ನೀವು ಕಥೆಯಲ್ಲಿ ಮನೋಹರವಾಗಿ ಹೆಣೆದು ಓದುವ ಮಕ್ಕಳ ಮನಸ್ಸಿನಮೇಲೆ ಪರಿಣಾಮವಾಗುವಂತೆ ಮಾಡಿದ್ದೀರಿ

ನನ್ನ ಮನೆಯಲ್ಲಿ ಚಿಕ್ಕಮಕ್ಕಳು ಅದನ್ನು ಓದಿ ಪೂರೈಸುವ ವರೆಗೆ ನನಗೆ ಪುಸ್ತಕವನ್ನು ನೋಡಲು ಕೂಡ ಅವಕಾಶವೀಯಲಿಲ್ಲ, ನನ್ನ ಕೈಗೆ ಪುಸ್ತಕ ಕೊಡುವಾಗ ಅದರ ಕಥೆಯನ್ನು ಕೂಡ ಬಾಯಿಪಾಠ ಮಾಡಿದಂತೆ ಸರಿಯಾಗಿ ಒಪ್ಪಿಸಿಬಿಟ್ಟರು, ಮಕ್ಕಳಿಗಾಗಿ ಕನ್ನಡದಲ್ಲಿ ಈ ಬಗೆಯ ಕಥೆಗಳನ್ನೂ ಹೊರಬೀಳುವಂತಾಗಲೆಂದು ಹಾರೈಸುವೆನು.

೨೦.४-४೬ ಡಿ. ಕೆ. ಭಾರದ್ವಾಜ

“ ಇದು ನೂರುಪುಟದ ಒಂದು ಕಾದಂಬರಿ ಬಹಳ ಸುಲಭಶೈಲಿಯಲ್ಲಿ ಬರೆಯಲ್ಪಟ್ಟದ್ದಾಗಿದ್ದು, ಒಂದೂ ಕ್ಲಿಷ್ಟ ಪದಗಳನ್ನೊಳಗೊಂಡಿರುವುದಿಲ್ಲ. ಶೈಲಿಯು ಹಳೇಸಂಪ್ರದಾಯದ ಸಣ್ಣ ಸಣ್ಣ ವಾಕ್ಯಗಳನ್ನೊಳಗೊಂಡು ಅತಿ ಸರಳವಾಗಿದೆ. .... ದ್ಯಾವಪ್ಪನು ಆಸಕ್ತಿಯಿಂದ ಮುಂಬೆಳಗನ್ನು ಕಾಣುತ್ತಾನೆ. ಸ್ವಪ್ರಯತ್ನದಿಂದ ಸನ್ನಿವೇಶದ ಒತ್ತಡಗಳನ್ನು ತನ್ನ ಅಭಿವೃದ್ಧಿಗೆ ಪರಿವರ್ತಿಸಿಕೊಳ್ಳುತ್ತಾ ಮುಂದೆ ಸರಿದ. ... ಈ ಪುಸ್ತಕವು ಓದುವುದಕ್ಕೆ ಸುಲಭವಾಗಿದ್ದು ಪ್ರಭೋದಿತ ನೀತಿಯನ್ನೂ, ಓದತಕ್ಕ ಹುಡುಗರಲ್ಲಿ ಸ್ವಪ್ರಯತ್ನದ ಹುರುಪನ್ನೂ ಹುಟ್ಟಿಸತಕ್ಕದ್ದಾಗಿದೆ. ... ಕನ್ನಡ ಭಾಷೆಯಲ್ಲಿ ಈ ತರಹ ಸರಳ ಕಾದಂಬರಿಗಳು ಅತಿ ವಿರಳ.

ಗ್ರಾಮಾಭ್ಯುದಯ

೧೯೪೮ ನೆಯ ಇಸವಿಯ ಮಿಡ್ಲ್ ಸ್ಕೂಲ್ ಪರೀಕ್ಷೆಯ ಪಠ್ಯ ಪುಸ್ತಕ

# ಕುರುಡು ಓದು

ಮಾನಪ್ಪ

ಶ್ರೀಮಾನ್ ಡಿ. ವಿ. ಗುಂಡಪ್ಪನವರ ಮುನ್ನುಡಿ

ಒಟ್ಟು ಮಾರಾಟಗಾರರು

ಶ್ರೀ ರಾಮಚಂದ್ರ ಬುಕ್‌ಡಿಪೋ

ಮೈಸೂರು

# ಮುನ್ನುಡಿ

---

ಶ್ರೀಮಾನ್ ಮಾನಪ್ಪನವರು ಈ ಕಥೆಯನ್ನು ಮಕ್ಕಳಿಗಾಗಿ ಬರೆದಿದ್ದಾರೆ. ನಿಜವಾದ ವಿದ್ಯೆ ಎಂಥಾದ್ದು ಎಂಬುದನ್ನು ತೋರಿಸಿಕೊಡುವುದು ಇದರ ಉದ್ದೇಶ. ಬರಿಯ ಪುಸ್ತಕಪಾಠ "ಕುರುಡು ಓದು" ನಮ್ಮ ಸುತ್ತಮುತ್ತಲಿನ ನಿತ್ಯ ಜೀವನದೊಡನೆ ಬೆರೆತು ಕಲಿತ ತಿಳಿವಳಿಕೆಯೇ ಸಾರ್ಥಕವಾಗುವಂಥ ವಿದ್ಯೆ. ಉದಾಹರಣೆ—ದ್ಯಾವಪ್ಪನ ಚರಿತ್ರೆ. ಅವನು ಮಲೆನಾಡಿನ ಹಳ್ಳಿಯಹುಡುಗ; ಬೆಟ್ಟ, ಕಾಡು, ಹೊಳೆ, ಮೋಡ, ಮಳೆ—ಇವು ಅವನ ಸಹವಾಸಿಗಳು. ಗದ್ದೆ ತೋಟಗಳ ದುಡಿಮೆ, ಷಿಕಾರಿ, ಬಯಲುನಾಟಕ—ಇವೇ ಅವನ ಪ್ರಥಮ ಪಾಠ. ಹೀಗೆ ಬೆಳೆದಂಥಾವನಲ್ಲಿ ಆರೋಗ್ಯವೂ ದೇಹಬಲವೂ ಉಕ್ಕಿಸುವ ಸಾಹಸೋತ್ಸಾಹವೂ ಮತ್ತು ಅತ್ಯಾಸೆಗಳನ್ನರಿಯದ ಸರಳ ಮನೋಭಾವಕ್ಕೆ ಸಹಜವಾದ ಒಳ್ಳೆಯ ತರವೂ ದ್ಯಾವಪ್ಪನ ಮೂಲಗುಣಗಳಾಗಿದ್ದವು. ಅವುಗಳ ಪ್ರಭಾವದಿಂದ ಅವನು ಲೋಕಪ್ರಯೋಜಕನಾಗಿ, ನಿಜವಾದ ವಿದ್ಯೆಯದಾರಿಯನ್ನು ಕಾಣುವಂತಾಗಿ, ಅದರಿಂದ ಅಭಿವೃದ್ಧಿ ಪಡೆದ ಈ ಕಥೆಯನ್ನು ಹೇಳುವಲ್ಲಿ ಶ್ರೀ ಮಾನಪ್ಪನವರು ಮಲೆನಾಡಿನ ಹಳ್ಳಿಗಾಡು ಬಾಳಿನ ಕೆಲವು ಸಂದರ್ಭಗಳನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಅವರ ಶ್ರದ್ಧೆಗೆ ತಕ್ಕ ಪ್ರೋತ್ಸಾಹ ದೊರೆಯಲೆಂದು ಹಾರೈಸುತ್ತೇನೆ.

ತಾ|| ೭-೫-೧೯೪೬      **ಡಿ. ವಿ. ಗುಂಡಪ್ಪ**

---

## ಒಂದು ಮಾತು

ಶ್ರೀ ಮಾನಪ್ಪನವರು ಈ ಪುಸ್ತಕ ನಮ್ಮ ಪ್ರಕಟಣೆಯಾಗಲು ಅವಕಾಶ ಮಾಡಿಕೊಟ್ಟು ಉಪಕರಿಸಿದ್ದಾರೆ. ಹಳ್ಳಿಗರ ಜೀವನವನ್ನು ಚಿತ್ರಿಸುವುದರಲ್ಲಿ ಮಾನಪ್ಪನವರು ನಿಪುಣರು. ಮಕ್ಕಳಿಗೆ ಸಾಹಸಕಾರ್ಯಗಳಲ್ಲಿ ಉತ್ಸಾಹ ಹುಟ್ಟಿಸುವ ಈ ಬಗೆಯ ಪುಸ್ತಕಗಳು ಕನ್ನಡದಲ್ಲಿ ವಿರಳ. ಲೇಖಕರು ಸಾಹಸಕಾರ್ಯದೊಡನೆ ನೀತಿಯನ್ನು ಸೇರಿಸಿ ಕಥೆ ಹೆಣೆದಿದ್ದಾರೆ. ಈ ಕಥೆಯಲ್ಲಿ ಮಲೆನಾಡಿನ ನಿತ್ಯ ಜೀವನದ ಘಟನೆಗಳನ್ನು ಮನೋಹರವಾಗಿ ಸರಳವಾಗಿ ವರ್ಣಿಸಿದಾರೆ. ಬರಿಯ ಓದು "ಕುರುಡು ಓದು"; ಮಕ್ಕಳು ಹಾಗಾಗಬಾರದು. ಅವರು ಓದಿನೊಡನೆ ಸಾಹಸವನ್ನು ಬೆಳಸಿಕೊಳ್ಳಬೇಕು; ನೀತಿವಂತರಾಗಬೇಕು ಎಂಬುದು ಈ ಕಥೆಯ ಉದ್ದೇಶ.

ಪ್ರಕಾಶಕ

---

## ಎರಡನೆಯ ಮುದ್ರಣದ ಎರಡು ಮಾತು.

ಮೈಸೂರು ಸರಕಾರದ ವಿದ್ಯಾಭ್ಯಾಸದ ಇಲಾಖೆಯವರು ಈ ಪುಸ್ತಕವನ್ನು ೧೯೪೮ ನೆಯ ಇಸವಿಯ ಮಿಡ್ಲ್ ಸ್ಕೂಲ್ ಪರೀಕ್ಷೆಯ ಪಠ್ಯ ಪುಸ್ತಕವಾಗಿ ನಿಯಮಿಸಿದುದರಿಂದ ಎರಡನೆಯ ಮುದ್ರಣಕ್ಕೆ ಅವಕಾಶ ದೊರೆಯಿತು. ಈ ಸೌಜನ್ಯಕ್ಕಾಗಿ ವಿದ್ಯಾಭ್ಯಾಸದ ಇಲಾಖೆಯ ಡೈರಕ್ಟರವರಿಗೂ ಪಠ್ಯ ಪುಸ್ತಕ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರಿಗೂ ಋಣಿ.

ಮೈಸೂರು<br>೧-೫-೧೯೪೭

ಲೇಖಕ

# ಕುರುಡು ಓದು

## ೧. ಹಾವಿನ ಬೇಟೆ

ಮಧ್ಯಾಹ್ನ. ವಿಶ್ರಾಂತಿಗಾಗಿ ಸ್ಕೂಲು ಬಿಟ್ಟಿತ್ತು. ಕೆಲವುಮಂದಿ ಹುಡುಗರು ಸ್ಕೂಲಿನ ಮುಂದೆ ಆಡುತಿದ್ದರು; ಕೆಲವರು ಮರದ ನೆರಳಿನಲ್ಲಿ ಕುಳಿತುಕೊಂಡಿದ್ದರು; ಇನ್ನು ಕೆಲವರು ಮರಗೋತಿ ಆಡುತ್ತಿದ್ದರು.

ನೆಲಗಡಲೆಕಾಯಿಯ ಅಣ್ಣಪ್ಪ ಬಂದ. ನಾಲ್ಕೈದುಜನ ಹುಡುಗರ ಗುಂಪು ಒಂದುಕಡೆ ಕುಳಿತಿತ್ತು. ಅವರಲ್ಲಿ ಮೇಲನರಸಿ ಸುಬ್ಬಣ್ಣ ಕಡಲೆಕಾಯಿಯವನನ್ನು ಕರೆದ. ಅಣ್ಣಪ್ಪ ಬಂದು ಕಡಲೆಕಾಯಿ ಕೊಟ್ಟ. ಯಾರಾದರೂ ದುಡ್ಡುಕೊಡಲು ಸುಬ್ಬಣ್ಣ ತನ್ನ ಸ್ನೇಹಿತರಿಗೆ ಹೇಳಿದ.

"ಕರೆದವನು ನೀನು, ನೀನೇ ಕೊಡು" ಎಂದು ರಾಮುಕೃಷ್ಣ ಉತ್ತರ ಕೊಟ್ಟ.

ಬೇರೆಕಡೆ ಮಾರಬೇಕಾದುದರಿಂದ ಅಣ್ಣಪ್ಪ ಹೇಳಿದ "ಇಂದಿಲ್ಲದಿದ್ದರೆ ನಾಳೆ ದುಡ್ಡು ಕೊಡಿ ಸ್ವಾಮಿ, ಎಲ್ಲಿಗೆ ಹೊಗುತ್ತದೆ?"

ಬಿಸಿಲುಮನೆ ನಾಗಯ್ಯ ತಮಾಷೆ ಮಾಡಿದ:

"ಇಂದೇ ದುಡ್ಡು ವಸೂಲುಮಾಡಿಕೊ ಅಣ್ಣಪ್ಪ! ಅವನು ಇನ್ನು ಒಂದು ತಿಂಗಳು ಸ್ಕೂಲಿಗೆ ಬರುವುದಿಲ್ಲ."

ಕಡಲೆಕಾಯಿಯ ಬುಟ್ಟಿಯನ್ನು ತಲೆಯಮೇಲೆ ಇಟ್ಟುಕೊಳ್ಳುತ್ತಾ ಅಣ್ಣಪ್ಪ ಹೇಳಿದ, "ಕಷ್ಟಗಾರನ ದುಡ್ಡು ಎಲ್ಲಿಗೂ ಹೋಗುವುದಿಲ್ಲ, ಅವರಿಲ್ಲದಿದ್ದರೆ ನೀವು ಕೊಡುತ್ತೀರಿ."

ಹುಡುಗರೆಲ್ಲ ನಕ್ಕರು. ಹೀಗೆ ಮಾತುಕತೆ ನಡೆಯುತ್ತಿತ್ತು. ನೆಲಗಡಲೆಕಾಯಿ ತಿನ್ನುತ್ತಿದ್ದ ಹೊನ್ನುಗದ್ದೆ ದ್ಯಾವಪ್ಪ ಹೇಳಿದ. "ಕಡಲೆಕಾಯಿ ತಿನ್ನುತ್ತಿರುವವನು ನಾನು, ನಾನು ಕೊಡುತ್ತೇನೆ."

ಅಣ್ಣಪ್ಪ ತೆಗೆದುಕೊಳ್ಳಲು ಕೈನೀಡಿದ. ಅಡ್ಡಬಂದು ಮೇಲನರಸಿ ಸುಬ್ಬಣ್ಣ ಹೇಳಿದ, "ಕರೆದವನು ನಾನು, ನಾನು ಕೊಡುತ್ತೇನೆ."

"ಬೇರೆಯವರಿಗೆ ದುಡ್ಡು ಕೊಡಲು ನೀನು ಹೇಳಿದ್ದೆ. ಈಗ ನಿನಗೆ ದುಡ್ಡು ಕೊಡಲ ಅಧಿಕಾರವಿಲ್ಲ, ನಾನು ಕೊಡುತ್ತೇನೆ'' ಎಂದು ರಾಮಕೃಷ್ಣನು ಹೇಳುತ್ತಾ ಅಣ್ಣಪ್ಪನ ಕೈಮೇಲೆ ದುಡ್ಡು ಹಾಕಿದ.

ಅಣ್ಣಪ್ಪನ ಕೈಯಲ್ಲಿದ್ದ ದುಡ್ಡನ್ನು ಬಿಸಿಲುಮನೆ ನಾಗಯ್ಯ ತೆಗೆದು ರಾಮಕೃಷ್ಣನ ಜೋಬಿಗೆ ಹಾಕಿ, ಅಣ್ಣಪ್ಪನ ಜೋಬಿಗೆ ತಾನು ದುಡ್ಡು ಹಾಕಿದ.

ಅಣ್ಣಪ್ಪ ಅಲ್ಲಿಂದ ಹೊರಟ.

ಅಣ್ಣಪ್ಪನ ಜೋಬಿಗೆ ದುಡ್ಡು ಹಾಕಿ ನಾಗಯ್ಯ ಕಡಲೆಕಾಯಿ ತಿನ್ನಲು ಕುಳಿತುಕೊಂಡ. ನೋಡುತ್ತಾನೆ ನೆಲಗಡಲೆಕಾಯಿ ಒಂದೂ ಇಲ್ಲ. ಕೈಯಿಂದ ದುಡ್ಡೂ ಹೋಯಿತು; ತಿನ್ನುವುದಕ್ಕೆ ಕಡಲೆಕಾಯಿಯೂ ಇಲ್ಲ. ಅವನು ಎಲ್ಲರ ಮುಖವನ್ನೂ ನೋಡಿದ, ಒಬ್ಬರೂ ಅವನ ಕಡೆ ನೋಡಲಿಲ್ಲ. ಹೊನ್ನುಗದ್ದೆ ದ್ಯಾವಪ್ಪ ಎದ್ದು ಓಡಿದ. ಅವನು ಓಡುತ್ತಲೆ ಮೇಲನರಸಿ ಸುಬ್ಬಣ್ಣ, ರಾಮಕೃಷ್ಣ ಇವರೂ ಓಡಿದರು.

ದ್ಯಾವಪ್ಪ ಮೊದಲು ಓಡಿದ್ದ. ಎಲ್ಲರಿಗಿಂತ ಕೊನೆಯಲ್ಲಿ ಓಡಿದವನು ರಾಮಕೃಷ್ಣ. ಆದ್ದರಿಂದ ನಾಗಯ್ಯ ಅವನನ್ನು ಹಿಂಬಾಲಿಸಿದ. ಓಡುತ್ತಿರುವಾಗ ರಾಮಕೃಷ್ಣ "ಅಯ್ಯೋ!" ಎಂದು ಕೂಗಿಕೊಂಡ. ಅವನ ಕೂಗು ಕೇಳಿ ಹುಡುಗರೆಲ್ಲ ಆ ಕಡೆ ಓಡಿದರು.

ಓಡುವ ಭರದಲ್ಲಿ ರಾಮಕೃಷ್ಣ ಹಾವಿನಮೇಲೆ ಕಾಲಿಡಲು ಹೋಗಿ ಹೆದರಿ ಕೂಗಿಕೊಂಡಿದ್ದ. ಇವರ ಗಲಾಟೆಯಿಂದ ಹಾವೂ ಗಾಬರಿಗೊಂಡಿತು. ಹಾವು ಎಂದು ತಿಳಿದ ಕೂಡಲೇ ಅಲ್ಲಿಗೆ ಬಂದಿದ್ದ ಹುಡುಗರೆಲ್ಲ ದಿಕ್ಕಾಪಾಲಾದರು. ಸ್ಕೂಲಿನ ಬಲಗಡೆ ಇಳಿಜಾರಾಗಿರುವ ಒಂದು ಮೈದಾನ. ತೋಳುಗಾತ್ರದ ಒಂದೂವರೆ ಮಾರುದ್ದದ ಹಾವು ಬಾಣ ಬಿಟ್ಟಹಾಗೆ ಆಕಡೆ ಓಡಿತು.

ದ್ಯಾವಪ್ಪ ಅಡ್ಡ ಬಂದು ಹಾವಿಗೆ ಕಲ್ಲಿನಿಂದ ಹೊಡೆದ. ಅದು ಹಾವಿನ ಬೆನ್ನಿಗೆ ತಗುಲಿತು. ಹಿಂದಿನಿಂದ ಸುಬ್ಬಣ್ಣ, ನಾಗಯ್ಯ ಬಂದು

ಕಲ್ಲುಗಳಿಂದ ಹೊಡೆದರು. ಅವರ ಒಂದು ಕಲ್ಲು ಹಾವಿನ ಬಾಲಕ್ಕೆ ತಾಗಿ ಅದು ಕೆರಳಿತು. ಹುಡುಗರು ಅಕ್ಕಪಕ್ಕಕ್ಕೆ ಸರಿದರು. ಹಾವು ಓಡಲು ಪ್ರಾರಂಭಿಸಿತು. ತಿರುಗಿ ಕಲ್ಲುಗಳ ಮಳೆ ಪ್ರಾರಂಭವಾಯಿತು. ದ್ಯಾವಪ್ಪನ ಕೈಗೆ ಒಂದು ದೊಣ್ಣೆ ಸಿಕ್ಕಿತು.

ಏಟು ಮೈಗೆ ಬಿದ್ದಾಗ ಹಾವು ಹಿಂದಕ್ಕೆ ಮಡಿಯುವುದು. ಇವರು ಸರಿಯುವರು. ಅದು ಓಡುತ್ತಲೇ ಕಲ್ಲುಗಳಿಂದ ಹೊಡೆಯುವರು. ಹೀಗೆ ಆ ಮೈದಾನವನ್ನು ನಾಲ್ಕೈದು ಸುತ್ತು ಹಾಕಿದರು. ಬರಬರುತ್ತಾ ಹಾವಿನ ಓಟ ಕಡಿಮೆಯಾಯಿತು: ಹೊರಳಾಟ ಹೆಚ್ಚಿತು. ದ್ಯಾವಪ್ಪ, ಸುಬ್ಬಣ್ಣ, ನಾಗಯ್ಯ ಇವರ ಧಾಳಿ ಜೋರಾಯಿತು. ಹೀಗೆ ಹದಿನೈದು ನಿಮಿಷ ನಡೆಯಿತು. ಕೊನೆಗೆ ಹಾವಿನ ಹೊಟ್ಟೆ ಮೇಲಾಯಿತು. ಮೈ ಕಪ್ಪಗಿದ್ದರೂ ಹೊಟ್ಟೆ ಬೆಳ್ಳಗಿರುವುದು ನೋಡಿ ಹುಡುಗರು ಆಶ್ಚರ್ಯ ಗೊಂಡರು.

ಹಾವು ಸತ್ತಮೇಲೆ ದ್ಯಾವಪ್ಪ, ಸುಬ್ಬಣ್ಣ, ನಾಗಯ್ಯ ಮೂರು ಮಂದಿಯೂ ಸುತ್ತಲೂ ನೋಡಿದರು, ಒಬ್ಬ ಹುಡುಗನೂ ಕಾಣಿಸಲಿಲ್ಲ. ಹುಡುಗರೆಲ್ಲ ಸ್ಕೂಲಿನಲ್ಲಿ ಬೆಂಚು, ಕಿಟಕಿಗಳ ಮೇಲೆ ನಿಂತು ನೋಡುತ್ತಿದ್ದರು. ದೊಣ್ಣೆಯಿಂದ ಹಾವನ್ನು ಎತ್ತಿ ದ್ಯಾವಪ್ಪ ಎಸೆದ. ನಾಲ್ಕು ಮಾರು ದೂರದಲ್ಲಿ ಸತ್ತ ಹಾವು ದೊಪ್ಪನೆ ಬಿತ್ತು. ಸ್ಕೂಲಿನಲ್ಲಿ ನಿಂತು ಕೊಂಡು ನೋಡುತ್ತಿದ್ದ ಹುಡುಗರು "ಹೋ!" ಎಂದು ಚಪ್ಪಾಳೆ ತಟ್ಟಿದರು.

ಮಧ್ಯಾಹ್ನ ಮನೆಗೆ ಕಾಫಿಗೆ ಹೋಗಿದ್ದ ಹೆಡ್‌ಮಾಸ್ಟರು ಬರುವುದು ತಡವಾದ್ದರಿಂದ ಅವಸರದಿಂದ ಬರುತ್ತಿದ್ದರು. ಹುಡುಗರು ಹಾವನ್ನು ದಾರಿಯಮೇಲೆ ಅಡ್ಡವಾಗಿ ಮಲಗಿಸಿ ಸ್ಕೂಲಿನಕಡೆ ಬಂದರು. ಹೆಡ್ ಮಾಸ್ಟರು ಬರುತಿರುವುದನ್ನು ನೋಡಿ ಜವಾನನು ಅಲ್ಲಿಗೆ ಓಡಿಬಂದ. ಹೆಡ್‌ಮಾಸ್ಟರ ಗಮನವೆಲ್ಲ ಸ್ಕೂಲಿನ ಕಡೆಗಿದ್ದುದರಿಂದ ಅವರು ಹಾವನ್ನು ನೋಡಲಿಲ್ಲ. ಇನ್ನೇನು ಕಾಲನ್ನು ಎತ್ತಿ ಇಡಬೇಕು, ಕಣ್ಣು ತಿವಿದ ಹಾಗಾಯಿತು. ಹಾವು ಅಡ್ಡ ಮಲಗಿದೆ. ಬೆಚ್ಚಿ ಹಿಂದಕ್ಕೆ ಸರಿದರು. ಅಷ್ಟ

ರಲ್ಲಿ ಜವಾನ ಬಂದ. ಹಾವು ಸತ್ತಿರುವುದೆಂದೂ, ಅದನ್ನು ದ್ಯಾವಪ್ಪ ಹೊಡೆದು ಕೊಂದು ಹಾಕಿರುವನೆಂದೂ ತಿಳಿಸಿದ.

ಸ್ಕೂಲಿಗೆ ಬಂದ ತಕ್ಷಣ ದ್ಯಾವಪ್ಪನನ್ನು ಕರೆದು ಹೆಡ್‌ಮಾಸ್ಟರು ಕೇಳಿದರು "ಏನಯ್ಯಾ ಹಾವಿನ ಬೇಟೆಗಾರ,-ಹಾವನ್ನು ಹೊಡೆದು ದಾರಿಯ ಮೇಲೆ ಏಕೆ ಹಾಕಿರುವೆ?"

"ನಮ್ಮಲ್ಲಿ ಹಾವನ್ನು ಕೊಂದರೆ ದಾರಿಯಮೇಲೆ ಹಾಕುವುದು ವಾಡಿಕೆ."

"ಇದು ಒಳ್ಳೇ ವಾಡಿಕೆ, ಜನ ಅದನ್ನು ನೋಡಿ ಹೆದರುವುದಿಲ್ಲವೇ?"

"ಬದುಕಿರುವ ಹಾವಿಗೆ ಹೆದರದಿರುವಾಗ ಸತ್ತ ಹಾವಿಗೆ ಯಾರಾದರೂ ಹೆದರುವರೆ ಸಾರ್?"

"ಅಲ್ಲಯ್ಯ ಹೇಗೆ ಗೊತ್ತು ಅದು ಸತ್ತಿದೆಯೆಂದು?"

"ಸುಮ್ಮನಿರುವುದೇ ಗೊತ್ತು. ಹಾವು ದಾರಿಯಮೇಲೆ ಸುಮ್ಮನೆ ನೇರ ಮಲಗುವುದಿಲ್ಲ"

"ಹಾಗಾದರೆ ನೀನು ಹಾದಿಯಮೇಲೆ ಹಾಕಿರುವುದರ ಪ್ರಯೋಜನ ವೇನು? ಜನರನ್ನು ಹೆದರಿಸುವುದಕ್ಕಲ್ಲವೇ?"

"ಹಾವನ್ನು ಕಂಡರೆ ಜನ ಎಲ್ಲಿ ಹೆದರುತ್ತಾರೆ? ಒಂದು ದುಷ್ಟ ಜಂತು ಹೋಗಲಿ ಎಂದು ಬಡಿದು ಹಾಕುತ್ತಾರೆ."

"ನಿನ್ನಂಥವರು ಹಾಗೆ ಮಾಡಬಹುದು. ಬಡಿದು ಹಾಕುವುದಿರಲಿ, ನಾನು ನೋಡಿ ಹೆದರಿಬಿಟ್ಟೆ. ಅದನ್ನು ದಾರಿಯಿಂದ ತೆಗೆಯಿಸಿ ಹಾಕು"

"ಸಮ್ಮನೆ ಅದನ್ನು ತೆಗೆಯುವ ಹಾಗಿಲ್ಲ. ಮೊದಲು ನೋಡಿ ದವರು ಅದರ ದಹನಕ್ರಿಯೆ ಮಾಡಿಸಬೇಕು. ಆದ್ದರಿಂದ ಅದನ್ನು ದಾರಿಯಮೇಲೆ ಹಾಕಿರುವುದು."

ಅವನ ಮಾತನ್ನು ಕೇಳಿ ಹೆಡ್‌ಮಾಸ್ಟರು ನಕ್ಕು ಹೇಳಿದರು, "ನಿಮ್ಮೂರಿನ ವಾಡಿಕೆ ಚೆನ್ನಾಗಿದೆ. ಹಾವನ್ನು ನೋಡಿ ಹೆದರಿದುದಲ್ಲದೆ ದಹನಕ್ರಿಯೆಯನ್ನೂ ನಾನೇ ಮಾಡಿಸಬೇಕೆನ್ನುವಿಯಲ್ಲ. ಕೊಂದವನು ನೀನು, ದಹನಕ್ರಿಯೆಗೆ ದಂಡ ಕೊಡುವವನು ನಾನು" ಎಂದು ಹೇಳಿ ಐದು ರೂಪಾಯಿಯ ನೋಟನ್ನು ಅವನ ಕೈಗೆ ಕೊಟ್ಟರು.

ಹುಡುಗರು ದಹನಕ್ರಿಯೆಗೆ ಹೊರಟರು. ಮಲೆನಾಡಿನ ಕಾಡುಗಳಲ್ಲಿ ಮರಗಳಿಗೆ ಕಡಮೆಯೇ? ಕಟ್ಟಿಗೆಯನ್ನು ಒಟ್ಟುಗೂಡಿ ಬೆಂಕಿ ಹಾಕಿದರು. ಎದೆ ಎತ್ತರದ ಕಟ್ಟಿಗೆಯ ರಾಶಿ ಒಂದು ಕ್ಷಣದಲ್ಲಿ ಮೊಳ ಎತ್ತರದ ಬೂದಿ ಗುಡ್ಡೆಯಾಯಿತು. ಆಮೇಲೆ ಹುಡುಗರು ಮಿಾಯಲು ತುಂಗಾನದಿಯ ಕಡೆ ಹೊರಟರು.

---

## ೨. ಈಜಲು ಹೋಗಿ ನದಿಯಲ್ಲಿ ಮುಳುಗಿದ್ದು

ಊರಿನ ಹೊರಗೆ ಗದ್ದೆ. ಗದ್ದೆಯ ಮಧ್ಯೆ ಕೆಲವು ಕಬ್ಬಿನ ಹಿತ್ತಿಲು, ಇನ್ನು ಕೆಲವು ಕಡೆ ತರಕಾರಿಯ ಹಿತ್ತಿಲು. ಕಬ್ಬಿನ ಸಸಿ ಬೆಳೆದು ಸೊಂಪಾಗಿ ಕಂಗೊಳಿಸುತಿವೆ. ಗಿಡ ಬಳ್ಳಿಗಳು ಹೂ, ಕಾಯಿಗಳಿಂದ ಮನೋಹರವಾಗಿ ಕಾಣಿಸುತಿವೆ. ರೈತರು ಹಿತ್ತಿಲಿಗೆ ನೀರನ್ನು ಹಾಯಿಸುತಿದ್ದಾರೆ.

ಹಾವಿನ ದಹನಕ್ರಿಯೆಯನ್ನು ಮುಗಿಸಿ ನದಿಗೆ ಸ್ನಾನಮಾಡಲು ಹೋಗುವ ಹುಡುಗರು ಅಂಚಿನಿಂದ ಗದ್ದೆಗೆ ಹಾರುತ್ತಾ, ನಗುತ್ತಾ, ಕುಣಿಯುತ್ತಾ ಹೋಗುತ್ತಿದ್ದರು. ಶಾಮಯ್ಯ ಬೊಜ್ಜು ಬೆಳೆದ ಹುಡುಗ. ತನ್ನ ಮೈಯನ್ನು ಹೊತ್ತುಕೊಂಡು ಹಾರಲಾರ. ಅವನ ಸ್ನೇಹಿತರು ಅವನನ್ನು ತಳ್ಳುತ್ತಾರೆ. ಅವನು ಮುಗ್ಗರಿಸಿ ನಿಲ್ಲುತ್ತಾನೆ. ಸುಬ್ಬಣ್ಣ ಎಲ್ಲರಿಗಿಂತಲೂ ಹೆಚ್ಚು ದೂರ ಹಾರಿದ. ನಾಗಯ್ಯ ಅವನನ್ನು ಮಿಾರಿಸಲು ಪ್ರಯತ್ನಪಟ್ಟ. ಆದರೆ ಒಂದು ಗೇಣು ಹಿಂದೆ ಬಿದ್ದ. ಸುಬ್ಬಣ್ಣನಿಗಿಂತಲೂ ಒಂದು ಗೇಣು ಮುಂದೆ ದ್ಯಾವಪ್ಪ ಹಾರಿದ.

ಗದ್ದೆಯ ತರುವಾಯ ಕಾಡು. ಅಲ್ಲಿ ದನಕರುಗಳು ಮೇಯುತ್ತಿದ್ದುವು. ಒಂದು ಕಡೆ ಎರಡು ಎತ್ತುಗಳು ಒಂದನ್ನೊಂದು ತಿವಿಯುತ್ತಿದ್ದವು. ಇನ್ನೊಂದುಕಡೆ ಕೆಲವು ಗೂಳಿಗಳು ದಿಣ್ಣೆಯನ್ನು ಕೋಡಿನಿಂದ ಕೆದಕುತ್ತಿದ್ದವು. ಕೆಲವು ಮಲಗಿ ಮೆಲಕುಹಾಕುತ್ತಿದ್ದವು. ಹಕ್ಕಿ ಪಕ್ಷಿ

ಗಳು ಅವುಗಳ ಮೈಮೇಲೂ ಅಕ್ಕಪಕ್ಕಗಳಲ್ಲಿಯೂ ಕುಳಿತುಕೊಂಡು ಕ್ರಿಮಿ ಕೀಟಗಳನ್ನು ಕುಕ್ಕಿ ನುಂಗುತ್ತಿದ್ದವು.

ಹುಡುಗರ ಗುಂಪು ಕುಣಿಯುತ್ತಾ, ನೆಗೆಯುತ್ತಾ ನದಿಯನ್ನು ತಲುಪಿತು. ನೀರಲ್ಲಿ ಚೆನ್ನಾಗಿ ಈಜಾಡಿ ಸ್ನಾನಮಾಡಿದರು. ತರುವಾಯ ಮರಳಿನಲ್ಲೂ ಆಟವಾಡಲು ಆರಂಭಿಸಿದರು. ಆಗ ಕೊಂಚದೂರದಲ್ಲಿ ಕೆಲವರು ಕೂಗಿಕೊಂಡರು. ಆಟವಾಡುತಿದ್ದ ಹುಡುಗರ ಗಮನ ಆ ಕಡೆ ಹೋಗಲಿಲ್ಲ. ಇನ್ನೂ ಜೋರಾಗಿ ಕೂಗು ಕೇಳಿಸಿತು. ಹುಡುಗರು ಆ ಕಡೆ ನೋಡಿದರು. ಸ್ವಲ್ಪ ದೂರದಲ್ಲಿ ಕೆಲವುಮಂದಿ ಕೂಗುತಿದಾರೆ. ಕೂಗನ್ನು ಕೇಳಿ ಆಡುತಿದ್ದ ಹುಡುಗರು ಅವರ ಹತ್ತಿರ ಓಡಿದರು. ಒಬ್ಬ ಹುಡುಗ ನೀರಿನಲ್ಲಿ ಮುಳುಗಿ ಏಳುತಿದಾನೆ. ಅವನ ಜೊತೆಯ ಮೂರು ಮಂದಿ ಹುಡುಗರು ನೀರಿನಲ್ಲಿ ನಿಂತು ನೋಡುತಿದಾರೆ. ದಡದಮೇಲೆ ಇಬ್ಬರು ದೊಡ್ಡವರು ನಿಂತಿದಾರೆ. ಎಲ್ಲರೂ ಕೂಗುತಿದಾರೆ; ಎಲ್ಲರ ಮೈಮೇಲೆ ಬಟ್ಟೆ ಇದೆ. ಈಜಿಹೋಗಿ ಮುಳುಗುವವನನ್ನು ಕಾಪಾಡುವ ಧೈರ್ಯ ಯಾರಲ್ಲಿಯೂ ಇಲ್ಲ. ಇವರು ಹೀಗೆ ಕೂಗುತಿರುವಾಗ ' ಗುಘುಂ ' ಎಂಬ ಶಬ್ದ ಕೇಳಿಸಿತು. ಎಲ್ಲರೂ ನೋಡಿದರು. ತಲೆಗೆ ಬಟ್ಟೆ ಕಟ್ಟಿಕೊಂಡು ದ್ಯಾವಪ್ಪ ಈಜಿ ಹೋಗುತಿದ್ದ. ದ್ಯಾವಪ್ಪ ಮುಳುಗುವವನ ಹತ್ತಿರ ಹೋಗಿ ತಲೆಯಮೇಲಿರುವ ಬಟ್ಟೆಯನ್ನು ಅವನ ಹತ್ತಿರ ಎಸೆದ.

ಗರುಡ ಕೋಳಿಮರಿಯನ್ನು ಹಿಡಿಯುವಂತೆ ಆ ಹುಡುಗ ಬಟ್ಟೆಯನ್ನು ಹಿಡಿದುಕೊಂಡ. ದ್ಯಾವಪ್ಪ ಬಟ್ಟೆಯನ್ನು ಎಳೆದ. ಅದರೊಂದಿಗೆ ಹುಡುಗ ಬಂದ. ಇಬ್ಬರೂ ದಡ ಸೇರಿದರು. ಅಷ್ಟರಲ್ಲಿ ಹುಡುಗ ಹೊಟ್ಟೆ ತುಂಬಾ ನೀರು ಕುಡಿದಿದ್ದ. ಹೊಟ್ಟೆ ಉಬ್ಬರಿಸಿತ್ತು, ಕರಿ ಗುಡ್ಡೆ ಮೇಲೆ ಹೋಗಿದ್ದವು. ಅವನ ಕಾಲನ್ನು ಮೇಲಕ್ಕೆ ಎತ್ತಿ ಹಿಡಿದರು. ಹೊಟ್ಟೆಯಿಂದ ನೀರು ಬರಲಿಲ್ಲ. ತರುವಾಯ ಮರಳಿನಮೇಲೆ ಮಲಗಿಸಿ ಬೆನ್ನನ್ನು ಮೆಟ್ಟಿದರು. ನೀರು ಬಾಯಿಂದ ' ಗೊದಗೊದನೆ ' ಹೊರಟಿತು. ಹೊಟ್ಟೆಯಿಂದ ನೀರು ಬಂದ ಕಾಲುಗಂಟೆಯ ತರುವಾಯ ಆ ಹುಡುಗನಿಗೆ ಪ್ರಜ್ಞೆ ಬಂತು.

ನೀರಿನಲ್ಲಿ ಮುಳುಗಿದ ಹುಡುಗ ಆ ಊರ ಪಾದರಿಯ ಮಗ, ವೆಸ್ಲಿ.

ವೆಸ್ಲಿ ಮೈಸೂರಿನಿಂದ ತನ್ನ ಅಕ್ಕನ ಮಕ್ಕಳೊಂದಿಗೆ ಈ ಊರಿಗೆ ಬಂದಿದ್ದ. ತಂದೆ ಮಕ್ಕಳೆಲ್ಲ ಸಾಯಂಕಾಲ ನದಿಯ ಹತ್ತಿರ ಹೋದರು. ಹೊಳೆಯಲ್ಲಿ ಹುಡುಗರು ಈಜುತಿರುವುದನ್ನು ನೋಡಿ ವೆಸ್ಲಿ ತನ್ನ ತಮ್ಮ ಮತ್ತು ಅಕ್ಕನ ಮಕ್ಕಳೊಂದಿಗೆ ನದಿಯಲ್ಲಿ ಸ್ನಾನಮಾಡಲು ಬಯಸಿದ. ಪಾದರಿ ತಮ್ಮ ಜೊತೆಯಲ್ಲಿ ಬಂದಿದ್ದ ಆ ಊರಿನವರೊಂದಿಗೆ ಮಾತನಾಡುತ್ತಾ ತೀರದಲ್ಲಿ ಕುಳಿತುಕೊಂಡರು. ವೆಸ್ಲಿ ಮತ್ತು ಅವನ ಜೊತೆಯವರು ಸ್ನಾನಮಾಡು ತಿದ್ದವರು ಈಜಲು ಪ್ರಯತ್ನ ಪಟ್ಟರು. ಹೀಗೆ ಮಾಡುತ್ತಿರುವಾಗ ಒಂದು ಸಾರಿ ವೆಸ್ಲಿ ಆಳವಾದ ನೀರಿಗೆ ಹೋದ. ಈಜಲು ಅವನಿಗೆ ಚೆನ್ನಾಗಿ ಬರುತ್ತಿರಲಿಲ್ಲ, ನೀರಿನಲ್ಲಿ ಮುಳುಗಿದ.

ತನ್ನ ಮಗನನ್ನು ಕಾಪಾಡಿದ್ದಕ್ಕಾಗಿ ಪಾದರಿ ದ್ಯಾವಪ್ಪನನ್ನು ತುಂಬಾ ಮರ್ಯಾದೆಯಿಂದ ಕಂಡರು. ದ್ಯಾವಪ್ಪ ಆ ಊರಿನ ಮುಖಂಡರಾದ ಹೊನ್ನುಗದ್ದೆ ತಮ್ಮಯ್ಯಗೌಡರ ತಮ್ಮನೆಂದು ತಿಳಿದಮೇಲೆ ಅವರಿಗೆ ಅಪಾರವಾದ ಸಂತೋಷವಾಯಿತು. ಮಾರನೆಯದಿನ ಖಂಡಿತವಾಗಿ ತಮ್ಮ ಮನೆಗೆ ಬರುವಂತೆ ದ್ಯಾವಪ್ಪನಿಗೆ ಆಹ್ವಾನವಿತ್ತರು.

ತನ್ನ ಜೊತೆಯ ಸ್ನೇಹಿತರೊಂದಿಗೆ ಬರುವುದಾಗಿ ದ್ಯಾವಪ್ಪ ಮಾತು ಕೊಟ್ಟ. ವೆಸ್ಲಿಯನ್ನು ಕರೆದುಕೊಂಡು ಪಾದರಿಯವರು ಮನೆಗೆಹೋದರು.

———

## ೩. ಕ್ರಿಕೆಟ್ ಟೀಮಿನ ಕ್ಯಾಪ್ಟನ್

ಮಾರನೆಯ ದಿನ ಮಧ್ಯಾಹ್ನ ದ್ಯಾವಪ್ಪ ತನ್ನ ಸ್ನೇಹಿತರೊಂದಿಗೆ ಪಾದರಿಯವರ ಮನೆಗೆ ಹೋದ. ಪಾದರಿಯವರು ಅತ್ಯಂತ ಪ್ರೀತಿ ವಿಶ್ವಾಸ ಗಳಿಂದ ಅವರನ್ನು ಸತ್ಕರಿಸಿ ತನ್ನ ಪತ್ನಿಗೆ ಅವರ ಪರಿಚಯ ಮಾಡಿ ಕೊಟ್ಟರು. ದ್ಯಾವಪ್ಪನನ್ನು ತುಂಬಾ ಹೊಗಳಿದರು. ಹೊಗಳಿಕೆಯನ್ನು ಕೇಳುವ ಸ್ವಭಾವದವನಲ್ಲದ ದ್ಯಾವಪ್ಪನಿಗೆ ಇದು ಹೆಚ್ಚು ಪ್ರಿಯವಾಗ ಲಿಲ್ಲ. ಅವನ ಮನೆಯವರೆಲ್ಲ ಅವನನ್ನು ಬಯ್ಯುತ್ತಿದ್ದರು. ಪಾದರಿಯವರು

ಹೊಗಳಿದ್ದರಿಂದ ಅವರಮೇಲೆ ದ್ಯಾವಪ್ಪನಿಗೆ ಅಭಿಮಾನ ಹುಟ್ಟಿತು. ಮಾತನ್ನೆಲ್ಲ ಕೇಳಿದ ಬಳಿಕ ಪಾದರಿಯವರ ಹೆಂಡತಿ ಹೇಳಿದರು, "ಮಗು ದ್ಯಾವಪ್ಪ, ನಿನ್ನ ದೆಸೆಯಿಂದ ನನ್ನ ಮಗನ ಪ್ರಾಣ ಉಳಿಯಿತು. ಜಗದ್ರಕ್ಷಕನು ನಿನಗೆ ಒಳ್ಳೆಯದನ್ನು ಮಾಡಲಿ. ವಿದ್ಯಾಬುದ್ಧಿಯನ್ನು ಕಲಿತು ಮುಂದಕ್ಕೆ ಬಾ." ತರುವಾಯ ಮಾತುಕತೆ ಆಟಪಾಟಗಳ ವಿಷಯಕ್ಕೆ ಹೋಯಿತು.

ವೆಸ್ಲಿ ಕ್ರಿಕೆಟ್ ಆಟದಲ್ಲಿ ಗಟ್ಟಿಗನೆಂದು ಕೀರ್ತಿಪಡೆದಿದ್ದ. ಪಾದರಿ ಹುಡುಗರನ್ನು ಕೇಳಿದರು. "ನಿಮ್ಮಲ್ಲಿ ಯಾರು ಯಾವ ಯಾವ ಆಟದಲ್ಲಿ ಗಟ್ಟಿಗರು ?"

ಹುಡುಗರು ಒಬ್ಬರ ಮುಖವನ್ನೊಬ್ಬರು ನೋಡಿದರು. ಯಾರೂ ಉತ್ತರಕೊಡಲಿಲ್ಲ. ಮೇಲನರಸಿ ಸುಬ್ಬಣ್ಣ ಆ ಕಡೆ ನೋಡುತ್ತಾ ಹೇಳಿದ, "ನಮ್ಮಲ್ಲಿ ನಾಗಯ್ಯ ಮತ್ತು ರಾಮಾಶಾಸ್ತ್ರಿ ಇಬ್ಬರೂ ಫುಟ್‌ಬಾಲ್ ಆಟದಲ್ಲಿ ಗಟ್ಟಿಗರು."

"ದ್ಯಾವಪ್ಪ ಹೇಗೆ ಆಡುತ್ತಾನೆ!" ಕುತೂಹಲದಿಂದ ಪಾದರಿ ಕೇಳಿದರು.

ಉತ್ತರಕೊಡದೆ ಎಲ್ಲರೂ ನಕ್ಕರು. ಪಾದರಿಯವರಿಗೆ ವಿಚಾರ ತಿಳಿಯಲಿಲ್ಲ. ಆದ್ದರಿಂದ, "ಏನು ?" ಎಂದು ಕೇಳಿದರು.

ಸ್ನೇಹಿತರ ಮುಖವನ್ನು ನೋಡುತ್ತಾ ಶಾಮಯ್ಯ ಹೇಳಿದ, "ಫುಟ್‌ಬಾಲ್ ಆಟದಲ್ಲಿ ಅವನನ್ನು ಯಾರೂ ತಮ್ಮ ಕಡೆ ಸೇರಿಸಿಕೊಳ್ಳುವುದಿಲ್ಲ"

"ಏಕೆ ? ಅವರು ಚೆನ್ನಾಗಿ ಆಡುವುದಿಲ್ಲವೇ ?" ಎಂದು ವೆಸ್ಲಿ ಕೇಳಿದ. "ಆಟದಲ್ಲಿ ದ್ಯಾವಪ್ಪ ಚೆಂಡನ್ನು ಒದೆಯುವುದು ಕಡಮೆ. ಮುಂದೆ ಬಂದವರನ್ನು ತಳ್ಳಿಬಿಡುತ್ತಾನೆ. ಅವನಿಗೆ ಕೈ ಮುಂದಿರುತ್ತವೇ ವಿನಾ ಕಾಲಿರುವುದಿಲ್ಲ" ಎಂದು ರಾಮಕೃಷ್ಣ ವಿವರಿಸಿದ.

"ಒಬ್ಬೊಬ್ಬರಿಗೆ ಒಂದೊಂದು ಆಟದಲ್ಲಿ ರುಚಿ" ಪಾದರಿ ಹೇಳಿದರು.

"ನಿಮಗೆ ಯಾವ ಆಟದಲ್ಲಿ ರುಚಿ ?" ವೆಸ್ಲಿ ರಾಮಕೃಷ್ಣನನ್ನು ಕೇಳಿದ.

ರಾಮಕೃಷ್ಣ ಬಾಯಿ ತೆರೆಯುವ ಮುಂಚೆ ದ್ಯಾವಪ್ಪ ಹೇಳಿದ, "ಅವನು ಆಡುವುದು ಕ್ರಿಕೆಟ್, ಅದರಲ್ಲಿ ಅವನು ಒಳ್ಳೆ ಆಟಗಾರ".

"ಹಾಗಾದರೆ ನಿಮ್ಮನ್ನೇತಕ್ಕೆ ಕ್ರಿಕೆಟ್ ಆಟಕ್ಕೆ ಸೇರಿಸಿಕೊಳ್ಳಲಿಲ್ಲ?" ಎಂದು ದ್ಯಾವಪ್ಪನನ್ನು ವೆಸ್ಲಿ ಕೇಳಿದ.

"ನಾನು ಎಷ್ಟೋ ಸಾರಿ ಚೆಂಡಾಟ ಬಿಟ್ಟು ಕ್ರಿಕೆಟ್ ಆಟಕ್ಕೆ ಬಾ ಎಂದು ಕರೆದೆ. ಅದೆಂಥ ಆಟ ಸುಮ್ಮನೆ ನಿಂತುಕೊಂಡು ಆಡುವುದು ಎಂದು ಹಾಸ್ಯಮಾಡಿದ" ಎಂದು ರಾಮಕೃಷ್ಣ ದ್ಯಾವಪ್ಪನ ಮೇಲೆ ದೂರು ಹೇಳಿದ.

ಮಾತು ಕೇಳುತ್ತಾ ಹಿಂದೆ ಮುಂದೆ ಸುತ್ತಾಡುತ್ತಿದ್ದ ಪಾದರಿ ಕುರ್ಚಿಯಮೇಲೆ ಕುಳಿತುಕೊಳ್ಳುತ್ತಾ ಹೇಳಿದರು, "ಕ್ರಿಕೆಟ್ ಎಂದರೆ ಅದೇನು ಸಾಮಾನ್ಯವಾದ ಆಟವಲ್ಲ. ನೋಡುವುದಕ್ಕೆ ಸುಮ್ಮನೆ ನಿಂತು ಕೊಂಡ ಹಾಗಿರುತ್ತದೆ. ಆದರೆ ಶರೀರದ ಪ್ರತಿಯೊಂದು ಅವಯವವೂ ಕೆಲಸಮಾಡುತ್ತಿರುತ್ತದೆ. ಹಾಗೆ ಫುಟ್‌ಬಾಲಿನ ವಿಚಾರ ಹೇಳಲು ಸಾಧ್ಯ ವಿಲ್ಲ. ನಮ್ಮ ವೆಸ್ಲಿ ಕ್ರಿಕೆಟ್‌ನಲ್ಲಿ ತುಂಬಾ ಕೀರ್ತಿ ಸಂಪಾದಿಸಿರುವನು."

ತನ್ನ ಮಾತಿನ ಸಮರ್ಥನೆಗೆ ರಾಮಕೃಷ್ಣ ಹೇಳಿದ, "ನಾನು ಅನೇಕ ಸಾರಿ ದ್ಯಾವಪ್ಪನಿಗೆ ಫುಟ್‌ಬಾಲ್ ಆಟಕ್ಕಿಂತ ಕ್ರಿಕೆಟ್‌ನಲ್ಲಿ ಒಳ್ಳೆ ಅಂಗ ಸಾಧನೆ ಆಗುತ್ತದೆ ಬಾ ಎಂದು ಹೇಳಿದೆ. ಅವನಿಗೆ ಓಡಲು, ಕುಣಿಯಲು ಅವಕಾಶ ಇರಬೇಕಂತೆ. ಆಗಲೆ ಅದು ಉತ್ತಮವಾದ ಆಟವಂತೆ."

ತಮ್ಮ ಮಗನನ್ನು ನೋಡಿ ಪಾದರಿ ಹೇಳಿದರು, "ವೆಸ್ಲಿ, ನೀನು ಮೈಸೂರಿಗೆ ಹೋಗುವ ಮುಂಚೆ ನಮ್ಮ ದ್ಯಾವಪ್ಪನಿಗೆ ಚೆನ್ನಾಗಿ ಕ್ರಿಕೆಟ್ ಆಟವನ್ನು ಕಲಿಸಿ ಹೋಗು ನೋಡೋಣ."

"ಅವರು ನಮ್ಮ ಜೊತೆಗೆ ಆಟಕ್ಕೆ ಬಂದರೆ ತುಂಬಾ ಸಂತೋಷ" ಎಂದು ರಾಮಕೃಷ್ಣ ಹೇಳಿದ.

"ನಮ್ಮ ವೆಸ್ಲಿ ಸ್ವಲ್ಪ ದಿನ ಇಲ್ಲಿಯೇ ಇರುವನು. ಅದುವರೆಗೂ ನಿಮ್ಮೊಂದಿಗೆ ಆಟಕ್ಕೆ ಬರುವನು. ಅವನನ್ನು ಸೇರಿಸಿಕೊಂಡು ನೀವು ಆಡಬಹುದು" ಎಂದು ಪಾದರಿ ಹುಡುಗರಿಗೆ ಹೇಳಿದರು.

ಅವರ ಮಾತಿಗೆ ಹುಡುಗರೆಲ್ಲ ಸಂತೋಷಪಟ್ಟರು. ಕ್ರಿಕೆಟ್‌ನಲ್ಲಿ

ಪ್ರಸಿದ್ಧಿಯಾದ ವೆಸ್ಲಿಯೊಂದಿಗೆ ಆಡಲು ಫುಟ್‌ಬಾಲಿನ ಆಟಗಾರರಾದ ನಾಗಯ್ಯ ಮುಂತಾದವರೂ ಕ್ರಿಕೆಟ್ ಆಟಕ್ಕೆ ಬರುವುದಾಗಿ ಹೇಳಿದರು. ಹೀಗೆ ಮಾತುಕಥೆ ನಡೆಯುತ್ತಿರುವಾಗ ಬಿಸ್ಕತ್ತು, ಹಣ್ಣು, ಕಾಫಿ ಬಂತು. ಮಾತುಕಥೆ, ತಿಂಡಿ ಮುಗಿಸಿಕೊಂಡು ಹೊರಡುವಾಗ ದ್ಯಾವಪ್ಪನಿಗೆ ಬೈಬಲನ್ನೂ, ಇತರ ಹುಡಗರಿಗೆ ಒಂದೊಂದು ಮಾರ್ಕನ ಸುವಾರ್ತೆಯ ಪ್ರತಿಯನ್ನೂ ಪಾದರಿ ಕೊಟ್ಟರು.

ಹುಡುಗರು ವೆಸ್ಲಿಯನ್ನು ಕರೆದುಕೊಂಡು ಸ್ಕೂಲಿನಕಡೆ ಹೊರಟರು.

ಈ ಗುಂಪಿನಲ್ಲಿ ಒಬ್ಬರೂ ಫುಟ್‌ಬಾಲ್ ಆಡಲು ಹೋಗಲಿಲ್ಲ. ಎಲ್ಲಾ ಕ್ರಿಕೆಟ್ ಮೈದಾನದಲ್ಲಿ ಸೇರಿದರು. ವೆಸ್ಲಿ ಆಕಡೆಯಿಂದ ಈಕಡೆ ಈಕಡೆಯಿಂದ ಆಕಡೆ ತಿರುಗುತ್ತಾ ಹುಡುಗರಿಗೆ ಅವರವರ ಸ್ಥಳದಲ್ಲಿ ನಿಲ್ಲು ವಂತೆ ಹೇಳುತಿದ್ದ. ಫುಟ್‌ಬಾಲ್ ಆಟದ ಇತರ ಹುಡುಗರೂ ಇದನ್ನು ನೋಡುತ್ತಾ ನಿಂತರು. ಆಟ ಪ್ರಾರಂಭವಾಯಿತು.

ಆಟದಲ್ಲಿ ಚೆಂಡಿನ ರಭಸಕ್ಕಿಂತಲೂ ವೆಸ್ಲಿಯ ಕುಣಿತ ಚೆನ್ನಾಗಿತ್ತು. ಮೈಸೂರಿನಿಂದ ಬಂದ ಪ್ರಸಿದ್ಧ ಆಟಗಾರನೆಂದು ಹುಡುಗರೆಲ್ಲ ಅವನ ಅನು ಕರಣ ಮಾಡತೊಡಗಿದರು.

ಕ್ರಿಕೆಟ್ ಆಟಕ್ಕೆ ಸೇರಿದ ದಿನ ದ್ಯಾವಪ್ಪನಿಗೆ ಆಟ ಅಷ್ಟು ಆಕರ್ಷ ಣೀಯವಾಗಿರಲಿಲ್ಲ. ಬ್ಯಾಟನ್ನು ಹಿಡಿದು ಚೆಂಡಿಗೆ ಹೊಡೆಯಲು ಬೀಸಿ ದರೆ ಮಾವಿನ ಕಾಯಿಯನ್ನು ಬೀಳಿಸಲು ಕೋಲನ್ನು ಎಸೆಯುವಂತೆ ಕಾಣುತ್ತಿತ್ತು. ಒಂದುಸಾರಿ ಚೆಂಡಿಗೆ ಹೊಡೆಯುವಾಗ ಬ್ಯಾಟು ಕೈ ತಪ್ಪಿತು. "ದ್ಯಾವಪ್ಪ ಮಾವಿನಕಾಯಿ ಉದುರಿಸಲು ಕೋಲನ್ನು ಎಸೆ ಯುತಿದಾನೆ" ಎಂದು ಹೇಳುತ್ತಾ ಹಡುಗರು ನಕ್ಕರು.

"ಅಲ್ಲ, ದ್ಯಾವಪ್ಪ ಹಾವು ಹೊಡೆಯುತಿದಾನೆ" ಎಂದು ಕೆಲವು ಮಂದಿ ಚಪ್ಪಾಳೆ ಹೊಡೆದರು.

ಇಂಥ ಮಾತುಗಳನ್ನು ಸಹಿಸುವ ಸ್ವಭಾವ ದ್ಯಾವಪ್ಪನದಲ್ಲ; ಸಹಿಸಬೇಕಾಯಿತು. ಆದರೂ "ಹಾವನ್ನು ಹೊಡೆದರೆ ದುಷ್ಟ ಪ್ರಾಣಿ ಯಾದರೂ ಒಂದು ಕಡಮೆಯಾಗುವುದು. ಬ್ಯಾಟಿನಿಂದ ಚೆಂಡನ್ನು ಹೊಡೆ ದರೆ ಬರುವ ಭಾಗ್ಯವೇನು?" ಎಂದು ಕೇಳಿಯೇಬಿಟ್ಟ.

" ಚಪ್ಪರದ ದ್ರಾಕ್ಷಿ ಯಾವಾಗಲೂ ಹುಳಿ" ಎಂದು ಕೆಲವರು ಅಣಕಿಸಿದರು.

ತಿರುಗಿ ಬೋಲ್ ಮಾಡಿದರು. ದ್ಯಾವಪ್ಪ ಬ್ಯಾಟ್ ಬೀಸಿದ. ಬ್ಯಾಟಿಗೆ ತಗಲಿದ ಚೆಂಡು ಬಂದ ರಭಸಕ್ಕೆ ಹತ್ತರಷ್ಟು ಜೋರಾಗಿ ಹೋಯಿತು. ಆಟಗಾರರು ಚಪ್ಪಾಳೆ ಹೊಡೆದು 'ಭೇಷ್' ಎಂದರು.

ಯುದ್ಧದಲ್ಲಿ ಗೆದ್ದ ಸೇನಾಪತಿಯಂತೆ ಸ್ನೇಹಿತರನ್ನು ನೋಡುತ್ತಾ ದ್ಯಾವಪ್ಪ ಹೇಳಿದ, " ನೋಡಿ ಹೇಗೆ ಹೊಡೆದೆ ಸ್ವಲ್ಪ ದಿನ ಹೋಗಲಿ, ನಿಮ್ಮನ್ನೆಲ್ಲ ಮೀರಿಸುವೆನು.''

ಒಬ್ಬ ಸ್ನೇಹಿತ ಹೇಳಿದ: "ಫುಟ್‌ಬಾಲಿನಲ್ಲಿ ಎಲ್ಲರನ್ನೂ ಮೀರಿಸಿ ಬಂದೆ. ಇನ್ನು ಕ್ರಿಕೆಟ್‌ನಲ್ಲಿ ಮೀರಿಸಿದರೆ ಸರಿ."

ಕ್ರಿಕೆಟ್ ಆಟದಲ್ಲಿ ಮನಸ್ಸಿಲ್ಲದಿದ್ದರೂ ವೆಸ್ಲಿಯ ಜೊತೆಯಲ್ಲಿ ಆಡಬೇಕೆಂಬ ಆಶೆ ಇರುತಿತ್ತು. ಸಮಯ ಸಿಕ್ಕಿದಾಗಲೆಲ್ಲ ವೆಸ್ಲಿಯೊಂದಿಗೆ ಕ್ರಿಕೆಟನ್ನು ಅಭ್ಯಾಸಮಾಡಿದ. ಮೊದಲು ಹಾಸ್ಯ ಮಾಡುತಿದ್ದ ಹುಡುಗರು ಈಗ ಅವನ ಆಟವನ್ನು ಮೆಚ್ಚಲು ಪ್ರಾರಂಭಿಸಿದರು. ಮಾರನೆಯ ವರುಷ ಕ್ರಿಕೆಟ್ ಟೀಮಿಗೆ ಅವನೆ ಕ್ಯಾಪ್ಟನ್ ಆದ. ಅವನ ಕ್ಯಾಪ್ಟನ್ ಕಾಲದಲ್ಲಿ ತಿಂಗಳಿಗೊಂದು ಮ್ಯಾಚ್ ತಪ್ಪುತಿರಲಿಲ್ಲ. ಮ್ಯಾಚಿನಲ್ಲಿ ಸೋಲೆಂಬುದನ್ನು ಕಾಣಲಿಲ್ಲ.

ಹೀಗೆ ಮ್ಯಾಚುಗಳನ್ನು ಗೆಲ್ಲುತಿರುವ ಸಮಯ. ಸ್ಕೂಲಿನ ವಾರ್ಷಿಕೋತ್ಸವ ಬಂತು. ವಾರ್ಷಿಕೋತ್ಸವದಲ್ಲಿ ಯಾವಾಗಲೂ ಆಟಪಾಟಗಳಲ್ಲಿ ಸ್ಪರ್ಧೆಯನ್ನಿಡುವುದು ಅಲ್ಲಿ ರೂಢಿ. ಈ ವರ್ಷ ಆಟಪಾಟಗಳ ಜೊತೆಯಲ್ಲಿ ನಾಟಕವನ್ನೂ ಅಭಿನಯಿಸಬೇಕೆಂದು ತೀರ್ಮಾನವಾಯಿತು.

ನಾಟಕವಾಡಲು ಸ್ಕೂಲಿನ ವಿದ್ಯಾರ್ಥಿಗಳಲ್ಲದೆ ಉಪಾಧ್ಯಾಯರೂ ಇತರ ಕಲಾಭಿಮಾನಿಗಳೂ ನೆರವಾಗಿದ್ದರು. ನಾಟಕ ಕಂಪನಿಯವರು ವಿನಾ ಇತರರು ನಾಟಕವಾಡಿದ್ದು ಆ ಊರಿನಲ್ಲಿ ಇದೇ ಮೊದಲು. ನಾಟಕ ಎಂದರೆ ನೋಡುವ ಆಶೆ ಎಲ್ಲರಿಗೂ ಉಂಟು. ಎರಡನೆಯದಾಗಿ ತಮ್ಮ ಮಕ್ಕಳೇ ಆಡುವರೆಂಬ ಕುತೂಹಲ ಅದರೊಂದಿಗೆ ಸೇರಿತ್ತು. ಆದ್ದರಿಂದ

ವಾರ್ಷಿಕೋತ್ಸವದ ದಿನ ಅಸಾಧ್ಯವಾದ ಜನಸಂದಣಿ. ವಿದ್ಯಾ ಇಲಾಖೆಯ ಡೆಪ್ಯುಟಿ ಡೈರೆಕ್ಟರವರು ಅಧ್ಯಕ್ಷತೆ ವಹಿಸಿದ್ದರು.

ಮೊದಲು ಆಟಪಾಟಗಳಲ್ಲಿ ಗೆದ್ದವರಿಗೆ ಬಹುಮಾನ ಹಂಚಲಾಯಿತು. ಎಲ್ಲರಿಗಿಂತಲೂ ಹೆಚ್ಚು ಬಹುಮಾನ ಪಡೆದವನು ದ್ಯಾವಪ್ಪ. ತಮ್ಮನನ್ನು ಕಂಡರೆ ಸೇರದಿದ್ದ ಹೊನ್ನುಗದ್ದೆ ತಮ್ಮಯ್ಯಗೌಡರು ಇದನ್ನು ನೋಡಿ ಸಂತೋಷಕ್ಕೆ ಬದಲು ಅಸೂಯೆಪಟ್ಟರು.

ಪಾರಿತೋಷಕ, ವರದಿ ಇವುಗಳ ತರುವಾಯ ಅಧ್ಯಕ್ಷಪೀಠವನ್ನು ಅಲಂಕರಿಸಿದ ವಿದ್ಯಾ ಇಲಾಖೆಯ ಡೆಪ್ಯುಟಿ ಡೈರೆಕ್ಟರವರು ಸ್ಕೂಲಿನ ಉನ್ನತಿಯನ್ನು ಕೊಂಡಾಡುತ್ತಾ ಹೇಳಿದರು :

"ವಾರ್ಷಿಕೋತ್ಸವದಲ್ಲಿ ಹುಡುಗರು ನಾಟಕವಾಡುವುದರಿಂದ ಅನೇಕ ಪ್ರಯೋಜನವಿದೆ. ಮಕ್ಕಳಿಗೆ ವಿದ್ಯೆಯಲ್ಲಿ ಅಭಿರುಚಿ, ಕಲೆಯಲ್ಲಿ ಅಭಿಮಾನ ಹುಟ್ಟುವುದು. ಜನರ ಮುಂದೆ ತಮ್ಮ ಭಾವಗಳನ್ನು ವ್ಯಕ್ತಮಾಡಲು ಸಹಾಯವಾಗುವುದು. ಭಾಷೆ ಬೆಳೆಯುವುದು. ಎಲ್ಲವುಗಳಿಗಿಂತ ಮುಖ್ಯವಾದ ಇನ್ನೊಂದು ಸಂಗತಿ ಇದೆ. ಹಿಂದೂಸ್ಥಾನದಲ್ಲಿ ತಂದೆ ತಾಯಿಂದಿರು ತಮ್ಮ ಮಕ್ಕಳನ್ನು ಪಾಠಶಾಲೆಗೆ ಕಳುಹಿಸಿದ ತರುವಾಯ ಅವರ ವಿದ್ಯಾಭ್ಯಾಸದ ವಿಚಾರ ಮನಸ್ಸಿನ ಮೇಲೆ ಹಾಕಿಕೊಳ್ಳುವುದಿಲ್ಲ. ನಾಟಕ ನೋಡುವ ನೆಪದಿಂದಲಾದರೂ ಅವರಿಗೆಲ್ಲರಿಗೂ ಪಾಠಶಾಲೆಗೆ ಬರಲು ಅವಕಾಶ ಕಲ್ಪಿಸಿದ ಹಾಗಾಗುವುದು. ಅದೇ ರೀತಿ ಅನೇಕಮಂದಿ ಇಂದು ಬಂದಿರಬಹುದು. ಅನೇಕಮಂದಿ ಹುಡುಗರು ಅನೇಕ ಸ್ಪರ್ಧೆಗಳಲ್ಲಿ ಜಯಶೀಲರಾಗಿರುವರು. ತಮ್ಮ ಮಕ್ಕಳ ಅಭಿನಯ ಸಾಮರ್ಥ್ಯಗಳು ಅವರಿಗೆ ತಿಳಿದ ಮೇಲೆ ಅವರು ಹೆಮ್ಮೆ ಪಡುವರು. ಮುಂದೆ ಅವರ ಪುರೋಭಿವೃದ್ಧಿಯಲ್ಲಿ ಹೆಚ್ಚು ಮಮತೆಯನ್ನು ವಹಿಸುವರು."

ಅಧ್ಯಕ್ಷಭಾಷಣ ಮುಗಿದಮೇಲೆ ನಾಟಕ ಪ್ರಾರಂಭವಾಯಿತು.

ಅನೇಕ ಮಂದಿ ಹುಡುಗರು ನಾಟಕದಲ್ಲಿ ಪಾತ್ರ ವಹಿಸಿದ್ದರು. ಕೆಲವು ಪಾತ್ರಧಾರಿಗಳ ಗುರುತು ಮನೆಯವರಿಗೆ ಸಿಕ್ಕಿತು. ತಮ್ಮ ಮಕ್ಕಳ ಅಭಿನಯ ಕೌಶಲ್ಯವನ್ನು ನೋಡಿ ತುಂಬಾ ಸಂತೋಷಪಟ್ಟರು. ಒಬ್ಬನ ಅಭಿ

ನಯ ಉತ್ತಮವಾಗಿತ್ತು. ಎಲ್ಲರೂ ಅವನನ್ನು ಮೆಚ್ಚಿದರು. ಅವನ ಗುರುತು ಯಾರಿಗೂ ಸಿಗಲಿಲ್ಲ. ಹೊನ್ನುಗದ್ದೆ ತಮ್ಮಯ್ಯಗೌಡರು ಆ ಪಾತ್ರಧಾರಿಗೆ ಒಂದು ಬೆಳ್ಳಿಯ ಕಪ್ಪನ್ನು ಕೊಡುವುದಾಗಿ ವಾಗ್ದಾನ ಮಾಡಿ ಇಪ್ಪತ್ತೈದು ರೂಪಾಯಿ ಕೊಟ್ಟರು.

ನಾಟಕ ಮುಗಿಯಿತು. ಹೊನ್ನುಗದ್ದೆ ತಮ್ಮಯ್ಯಗೌಡರು ಕೊಟ್ಟ ಬಹುಮಾನವನ್ನು ಸಭೆಯಲ್ಲಿ ಬಹಿರಂಗಪಡಿಸಿದರು. ಎಲ್ಲರು ಸಂತೋಷ ದಿಂದ ಚಪ್ಪಾಳೆ ಹೊಡೆದರು. ತನ್ನ ಪಾತ್ರವನ್ನು ಚೆನ್ನಾಗಿ ನಿರ್ವಹಿಸಿ ಬಹುಮಾನವನ್ನು ಪಡೆದ ದ್ಯಾವಪ್ಪನನ್ನು ಹೊಗಳಿದರು. ಅವನ ಹೆಸ ರನ್ನು ಕೇಳಿ ನೆರೆದ ಜನರು ಇನ್ನೂ ಜೋರಾಗಿ ಚಪ್ಪಾಳೆ ಹೊಡೆದರು. ತಾನು ಮೆಚ್ಚಿದ ಪಾತ್ರಧಾರಿ ತನ್ನ ತಮ್ಮನೆಂದು ತಿಳಿದ ತಕ್ಷಣ ತಮ್ಮಯ್ಯ ಗೌಡರ ಮೈ ಬೆವರಿತು. ಆತನ ಅಭಿವೃದ್ಧಿಗೆ ತಾವು ತೊಂದರೆಗಳನ್ನು ತಂದೊಡ್ಡುತ್ತಿದ್ದರೂ ಅವನು ಮುಂದುವರಿಯುತ್ತಿರುವನು. ಎಲ್ಲರ ಮೆಚ್ಚಿ ಗೆಗೆ ಪಾತ್ರನಾಗಿರುವನಲ್ಲದೆ ತಮ್ಮ ಕೈಯಿಂದಲೂ ಬಹುಮಾನ ಪಡೆದನಲ್ಲ ಎಂದು ನೊಂದುಕೊಂಡರು.

---

## ೪. ವೀರ ಅಭಿಮನ್ಯು

ದ್ಯಾವಪ್ಪನ ತಂದೆ ಧರ್ಮಯ್ಯಗೌಡರು ಜಮೀನುದಾರರು. ಅನುಕೂಲ ವಂತರು. ಅವರ ಹಿರಿಯ ಹೆಂಡತಿಗೆ ತಮ್ಮಯ್ಯನೆಂಬ ಒಬ್ಬ ಮಗನಿದ್ದ. ತಮ್ಮಯ್ಯಗೌಡರ ತಾಯಿ ತೀರಿದ ತರುವಾಯ ಧರ್ಮಯ್ಯಗೌಡರು ತಿರುಗಿ ಮದುವೆಯಾದರು. ಬಹಳ ಕಾಲದವರಿಗೂ ಮಕ್ಕಳಾಗಲಿಲ್ಲ. ಕೊನೆಗೆ ದ್ಯಾವಪ್ಪ ಹುಟ್ಟಿದ. ಅವನು ಹುಟ್ಟಿದ ಎರಡು ವರುಷಕ್ಕೆ ಧರ್ಮಯ್ಯ ಗೌಡರು ತೀರಿಕೊಂಡರು. ಮನೆಯ ಆಡಳಿತ ಹಿರಿಯ ಮಗ ತಮ್ಮಯ್ಯ ಗೌಡರ ಕೈ ಸೇರಿತು. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡ ದ್ಯಾವಪ್ಪನ ತಾಯಿ ದುಃಖದಲ್ಲಿ ಸೊರಗುತ್ತಿದ್ದರು. ತಮ್ಮಯ್ಯಗೌಡರು ತನ್ನ ಮಕ್ಕಳಿಗಾಗಿ ಸಂಪಾದನೆಯನ್ನು ಶೇಖರಿಸುತ್ತಾ ಹೊರಗೆ ಸಾಲ

ತೋರಿಸುತ್ತಾ ಬಂದರು. ತಮ್ಮನನ್ನು ಸ್ವೇಚ್ಛೆಯಾಗಿ ಬಿಟ್ಟರೆ ಎಲ್ಲಿ ತನ್ನ ಮೇಲೆ ತಿರುಗಿಬೀಳುವನೋ ಎಂದು ಆತನನ್ನು ಬಹಳ ಕಟ್ಟುನಿಟ್ಟನಲ್ಲಿಟ್ಟಿದ್ದರು. ವಿದ್ಯಾಬುದ್ಧಿಯನ್ನು ಕಲಿತು ಮುಂದಕ್ಕೆ ಬಂದರೆ ತನಗೆಲ್ಲಿ ತೊಂದರೆಯಾಗುವುದೋ ಎಂದು ಬಹಳ ಜಾಗರೂಕತೆಯಿಂದ ಇದ್ದರು.

ತಮ್ಮಯ್ಯಗೌಡರ ಈ ಕಟ್ಟುನಿಟ್ಟು ಸೌಭಾಗ್ಯದಿಂದ ದ್ಯಾವಪ್ಪನಿಗೆ ಶುಭವಾಗಿ ಪರಿಣಮಿಸುತಿದ್ದವು.

ಒಂದು ದಿನ ದ್ಯಾವಪ್ಪನನ್ನು ಮನೆಯ ಕಾವಲಿಗೆ ಬಿಟ್ಟು ತಮ್ಮಯ್ಯಗೌಡರು ಮಕ್ಕಳುಮರಿಯೊಂದಿಗೆ ಊಟ ಮುಗಿಸಿ ಭಾಗವತರ ಆಟ ನೋಡಲು ಹೋದರು. ಹಳ್ಳಿಯವರಿಗೆ ಭಾಗವತರ ಆಟವೆಂದರೆ ಪ್ರಾಣ. ಎಷ್ಟು ಮೈಲಿಗಳಾದರೂ ನೋಡಲು ಹೋಗುವರು. ದ್ಯಾವಪ್ಪ ಹಾಸಿಗೆಯ ಮೇಲೆ ಮಲಗಿಕೊಂಡ. ಮನಸ್ಸೆಲ್ಲ ಯಕ್ಷಗಾನದ ಆಟದ ಮೇಲೆ. ರಾತ್ರಿ ಕಳೆದಹಾಗೆಲ್ಲ 'ಚಂಡೆ'ಯ ಧ್ವನಿ ಜೋರಾಗುತ್ತಾ ಬಂತು. ದ್ಯಾವಪ್ಪನಿಗೆ ಮಲಗಿಕೊಂಡಿರಲು ಸಾಧ್ಯವಾಗಲಿಲ್ಲ. ಯಾರಿಗೂ ಪತ್ತೆಯಿಲ್ಲದ ಹಾಗೆ ಭಾಗವತರ ಆಟ ನೋಡಿಕೊಂಡು ಬರಲು ಮನೆಯಿಂದ ಹೊರಬಿದ್ದ.

ಮನೆಯ ಮುಂದೆ ಗದ್ದೆಕೋಗು. ಚಂದ್ರ ಮೇಲೇರುತಿದಾನೆ. ದಾರಿಯಮೇಲೆ ಹೋದರೆ ಯಾರಾದರೂ ನೋಡಿಯಾರು ಎಂಬ ಭಯದಿಂದ ದ್ಯಾವಪ್ಪ ದಾರಿಬಿಟ್ಟು, ತಲೆ ನೆಟ್ಟಗೆ ಮಾಡದೆ ಕಾಲನ್ನು ಬೀಸಿ ನಡೆದ. ಗದ್ದೆಯ ಆಚೆ ಹಳ್ಳ. ಅವನು ಹಳ್ಳ ಇಳಿದ. ತನ್ನನ್ನು ಇನ್ನು ಯಾರೂ ನೋಡಲಾರರು ಎಂಬ ಧೈರ್ಯ ಹುಟ್ಟಿತು. ಹಳ್ಳದಲ್ಲಿ ಮಂಡಿಯವರೆಗೂ ನೀರು. ಹಳ್ಳ ದಾಟುತ್ತಲೇ ಕಾಡು ಪ್ರಾರಂಭ. ಕಾಡನ್ನು ನುಗ್ಗಿದ. ಕಾಡಿನಲ್ಲಿ ಬೆಳದಿಂಗಳು ಮರೆಯಾಯಿತು. ದಾರಿ ಬಿಟ್ಟು ಬಂದಿದ್ದರಿಂದ ಆಗಲೇ ದಾರಿ ತಪ್ಪಿತ್ತು. 'ಚಂಡೆ'ಯ ಶಬ್ದವನ್ನು ಹಿಡಿದುಕೊಂಡು ನಡೆಯುತ್ತಿದ್ದ. ಕಾಡು ಇಳಿಜಾರಾದ್ದರಿಂದ ತಗ್ಗಿನಲ್ಲಿ 'ಚಂಡೆ'ಯ ಶಬ್ದ ಕೇಳುವುದು ನಿಂತುಹೋಯಿತು. ಕಾಡಿನಿಂದ ಹೊರಬಿದ್ದರೆ ಸಾಕೆಂದು ದಾರಿ ಹುಡುಕುತ್ತಾ ನಡೆದ. ಮುಂದೆ ಹೋದಷ್ಟು ಕಾಡು ದಟ್ಟವಾಗುತ್ತಾ ಬಂತು. ಹೆಮ್ಮರಗಳೇ ಕಾಣಿಸಿದವು. ಎಲೆ ಒಣಗಿ ಬಿದ್ದಿದ್ದವು. ನಡೆಯುವಾಗ ಶಬ್ದವಾಗುತಿತ್ತು. ಈ ಶಬ್ದ ಅವನಿಗೆ ಸ್ವಲ್ಪ ಧೈರ್ಯತರುತಿತ್ತು. ಹೀಗೆ

ಆ ಭಯಂಕರವಾದ ಕಾಡಿನಲ್ಲಿ ಹೋಗುತಿರುವಾಗ ಮರದ ಮೇಲಿನಿಂದ ಮನುಷ್ಯರ ಧ್ವನಿ ಕೇಳಿಸಿತು. ಸುತ್ತಲೂ ನೋಡಿದ. ಯಾರೂ ಕಣ್ಣಿಗೆ ಬೀಳಲಿಲ್ಲ. ಮುಂದೆ ಹೆಜ್ಜೆ ಹಾಕಿದ. ಮರದ ಮೇಲಿನಿಂದ "ಯಾರದು ?" ಎಂದು ಧ್ವನಿ ಬಂತು.

ದ್ಯಾವಪ್ಪ ಮರದ ಕಡೆ ನೋಡುತ್ತಾ ಕೇಳಿದ, " ಯಾರದು ಕೇಳುವವರು ?"

" ನಾನು ಕೆಳಮನೆ ಪುಟ್ಟಣ್ಣ, ಹಂದಿ ಹೊಡೆಯಲು ಮರಸಿಗೆ ಬಂದಿದ್ದೇನೆ."

" ನಾನು ಹೊನ್ನಗದ್ದೆ ದ್ಯಾವಪ್ಪ."

" ಅಲ್ಲ ದ್ಯಾವಪ್ಪ, ಈ ಕಾಡಿನಲ್ಲಿ ಈ ರಾತ್ರಿ ಒಬ್ಬಂಟಿಗನಾಗಿ ಏಕೆ ಬಂದೆ? ತರಗು ಶಬ್ದವಾಗುವುದನ್ನು ಕೇಳಿ ಹಂದಿಯೇ ಬಂತು ಎಂದು ನೆನಸಿ ಕೋವಿ ಎದೆಗೆ ಏರಿಸಿ ಗುರಿ ಹಿಡಿದುಕೊಂಡಿದ್ದೆ. ನೋಡು ಒಂದು ಕ್ಷಣದಲ್ಲಿ ಎಂಥಾ ಕೆಲಸ ಆಗುತಿತ್ತು. ನೀನು ನೆಟ್ಟಗೆ ನಾನು ಕುಳಿತಿದ್ದ ಮರದ ಕೆಳಗೆ ಬಂದುದು ಸರಿಯಾಯಿತು. ಹಂದಿ ಬರುತಿದೆ ಬರಲಿ ಎಂದು ಸುಮ್ಮನಿದ್ದೆ. ನೀನು ಸ್ವಲ್ಪ ಆ ಕಡೆ ಹೋಗಿದ್ದರೆ ಶಬ್ದದ ಕಡೆಗೆ ಗುರಿಯಿಟ್ಟು ಹೊಡೆಯುತಿದ್ದೆ. ಈ ಕಾಡಿನಲ್ಲಿ ಏಕೆ ಬಂದೆ ?"

ತಲೆಮರೆಸಿಕೊಂಡು ಹೋಗಲು ಪ್ರಯತ್ನಪಡುತ್ತಿದ್ದ ದ್ಯಾವಪ್ಪ ಈಗ ಬಹಿರಂಗಕ್ಕೆ ಬಂದ. ನಿಜ ಹೇಳಲು ಭಯ. ಅಣ್ಣನಿಗೆ ಎಲ್ಲಿ ತಿಳಿಸಿ ಬಿಡುವನೋ ಎಂಬ ಯೋಚನೆ. ಭಾಗವತರ ಆಟಕ್ಕೆ ಹೋಗುವ ವಿಚಾರವನ್ನು ಮರೆಮಾಚಬಹುದು, ಕಾಡಿಗೆ ಬಂದ ವಿಚಾರವನ್ನಾದರೂ ಹೇಳಬೇಕು. ನಿಜ ಹೇಳುವುದು ಉತ್ತಮವೆಂದು ತಿಳಿದು ಹೇಳಿದ " ಹೊಳೆಮಕ್ಕಿಯಲ್ಲಿ ಭಾಗವತರ ಆಟವಂತೆ. ಅಲ್ಲಿಗೆಂದು ಹೊರಟೆ ; ಮಧ್ಯ ದಾರಿ ತಪ್ಪಿ ಇಲ್ಲಿಗೆ ಬಂದೆ."

"ಜೊತೆ ಯಾರೂ ಇಲ್ಲದ ಮೇಲೆ ನೀನೊಬ್ಬನೇ ಏತಕ್ಕೆ ಬಂದೆ. ಹೊಳೆಮಕ್ಕಿ ಎಲ್ಲಿ ? ನೀನು ಬಂದಿರುವುದು ಎಲ್ಲಿ ? ನಿನ್ನ ದೆಸೆಯಿಂದ ಪ್ರಾಣಿ ಎಲ್ಲ ಗಾರಾಗಿವೆ, ಇನ್ನು ಬರುವುದಿಲ್ಲ. ನಾನೂ ಮನೆಗೆ ಹೋಗುತ್ತೇನೆ. ನಿಲ್ಲು ಅಷ್ಟುದೂರ ದಾರಿ ತೋರಿಸುತ್ತೇನೆ."

ಇಬ್ಬರೂ ಅಲ್ಲಿಂದ ಹೊರಟರು. ಕಾಡಿನ ಹೊರಗಡೆ ದ್ಯಾವಪ್ಪನನ್ನು ಬಿಟ್ಟು ಪುಟ್ಟಣ್ಣ ಹೇಳಿದ "ನೋಡು, ಎಡಗಡೆ ಹೊಳೆಮುಕ್ಕಿ ಇದೆ. ಆದರೆ ನೆಟ್ಟಗೆ ಹೋಗುವುಕ್ಕೆ ದಾರಿ ಇಲ್ಲ. ಮುಂದೆ ಕಾಣುವ ಗದ್ದೆ ಕೋಗಿನ ಬದಿಯಲ್ಲಿ ಸುತ್ತಿಕೊಂಡು ಹೋಗು.'"

ಗದ್ದೆಯ ಪಕ್ಕದಲ್ಲಿಯೇ ಬಹಳ ದೂರ ದ್ಯಾವಪ್ಪ ಹೋದ. ಎಷ್ಟು ದೂರ ಹೋದರೂ ಗದ್ದೆ ಮುಗಿಯಲಿಲ್ಲ. ಒಂದು ಮರವನ್ನು ಹತ್ತಿ ಕಿವಿಗೊಟ್ಟು ಕೇಳಿ 'ಚಂಡೆ' ಯ ಶಬ್ದ ಕೇಳಿಸುವ ದಿಕ್ಕಿನ ಕಡೆ ನೆಟ್ಟಗೆ ನುಗ್ಗಿದ. ಸ್ವಲ್ಪದೂರ ದಾರಿ ಅನುಕೂಲವಾಗಿತ್ತು. ಗದ್ದೆಯನ್ನು ದಾಟಿ ಮರಗಳ ತೋಪನ್ನು ಪ್ರವೇಶಿಸಿದ. ಸ್ವಲ್ಪ ದೂರದ ತರುವಾಯ ತೋಪು ಕಾಡಾಗುತ್ತಾ ಬಂತು. ಈ ಸಾರಿ ಅವನು ಕಾಡನ್ನು ನುಗ್ಗದೆ ಅದರ ಅಂಚನ್ನು ಹಿಡಿದುಕೊಂಡು ನಡೆದ. ಬರ ಬರುತ್ತಾ 'ಚಂಡೆ'ಯ ಶಬ್ದ ಜೋರಾಗಿ ಕೇಳಿಸಿತು. ತತ್ತರಿಸುತಿದ್ದ ಕಾಲಿಗೆ ರೆಕ್ಕೆ ಬಂದ ಹಾಗಾ ಯಿತು. ಹೃದಯ ಅರಳಿತು. ಕಾಡಿನ ಅಂಚಿನಲ್ಲಿ ಹೋಗುವುದನ್ನು ಬಿಟ್ಟು ನೆಟ್ಟಗೆ ಮುಂದೆ ನುಗ್ಗಿದ. ಮುಂದೆ ಮರಗಿಡಗಳಿಲ್ಲದ ದೊಡ್ಡ ಬಯಲು. ಭಾಗವತರ ಆಟದ ರಂಗಸ್ಥಳ, ದೀಪ ಎಲ್ಲಾ ಕಾಣಿಸಿದವು. ದಾರಿ ಹಿಡಿದರೆ ತಡವಾಗುವುದೆಂದು ದೀಪ ಕಾಣಿಸುತಿರುವ ಕಡೆ ಹೊರಟ. ಸ್ವಲ್ಪದೂರ ಹೋಗುವುದರೊಳಗಾಗಿ ತುಂಬಾ ಕಡಿದಾದ ಸ್ಥಳ ಸಿಕ್ಕಿತು. ಕೆಳಗೆ ಹಳ್ಳ ಹರಿಯುತಿದೆ. ಹೆಚ್ಚು ಸಮಯ ಯೋಚನೆ ಮಾಡುವ ಹಾಗಿಲ್ಲ. ಅಕ್ಕಪಕ್ಕವನ್ನು ನೋಡಿದ. ಇಳಿಯಲು ಎಲ್ಲಿಯೂ ಅವಕಾಶ ವಿಲ್ಲ. 'ದರೆ' ಬಹಳ ಕಡಿದಾಗಿದೆ. ದರೆಯಮೇಲೆ ಸಣ್ಣ ಸಣ್ಣ ಗಿಡ ಗಳು ಬೆಳೆದಿವೆ. ಆ ಗಿಡಗಳ ಸಹಾಯದಿಂದ ಎರಡು ಮಾರು ಕೆಳಗಿಳಿದ. ಅಲ್ಲಿಂದ ಮುಂದೆ ಇಳಿಯಲು ಸಾಧ್ಯವಾಗಲಿಲ್ಲ. ಮೇಲೆ ಎದ್ದಿರುವ ಒಂದು ಬೇರನ್ನು ಹಿಡಿದುಕೊಂಡು ಜೋಲುಬಿದ್ದ. ಬೆಳದಿಂಗಳಲ್ಲಿ ಸರಿ ಯಾಗಿ ಕಾಣಲಿಲ್ಲ. ಜೋಲು ಬಿದ್ದ ಕೂಡಲೆ ಬೇರು ಕಿತ್ತುಬಂತು. ಕಾಲಿಗೆ ಸರಿಯಾದ ಆಧಾರ ಸಿಕ್ಕಿರಲಿಲ್ಲ. ಬೇರು ಸಮೇತನಾಗಿ ಹಳ್ಳಕ್ಕೆ ಧೊಪ್ಪನೆ ಬಿದ್ದ.

ದ್ಯಾವಪ್ಪ ರಂಗಸ್ಥಳ ತಲಪುವ ಹೊತ್ತಿಗೆ ಮಧ್ಯರಾತ್ರಿ ಕಳೆದು ಅರ್ಧ

ಆಟವೂ ಮುಗಿದಿತ್ತು. ಇವನು ಹೋಗಿ ಜನರ ಮಧ್ಯದಲ್ಲಿ ಕುಳಿತು ಕೊಂಡ. ಅಲ್ಲಿ ಹೆಚ್ಚು ಹೊತ್ತು ಕುಳಿತುಕೊಳ್ಳಲಾಗಲಿಲ್ಲ. ಅಂದು ಅಭಿಮನ್ಯುವಿನ ಕಾಳಗ. ಕಥೆ ಸನ್ನಿವೇಶಗಳೆರಡೂ ದ್ಯಾವಪ್ಪನಿಗೆ ಪ್ರಿಯ ವಾಗಿದ್ದವು. ಕೆಲವರಿಗೆ ನೋಡುವುದರಲ್ಲಿ ತುಂಬಾ ಉತ್ಸಾಹ; ಇನ್ನು ಕೆಲವರಿಗೆ ಮಾಡುವುದರಲ್ಲಿ ತುಂಬಾ ಉತ್ಸಾಹ. ದ್ಯಾವಪ್ಪ ರಂಗಸ್ಥಳದಿಂದ ಮೆಲ್ಲಗೆ ಜಾರಿದ.

ಆಟದಲ್ಲಿ ಅರ್ಜುನನು ಯುದ್ಧಮಾಡುತ್ತಾ ಬೇರೆಕಡೆ ಹೋಗಿದ್ದ ಅವನೊಂದಿಗೆ ಕೃಷ್ಣನೂ ಹೋಗಿದ್ದ. ಇದನ್ನು ತಿಳಿದ ಕೌರವರು ಚಕ್ರ ವ್ಯೂಹವನ್ನು ರಚಿಸಿ ಧರ್ಮರಾಯನನ್ನು ಹಿಡಿಯಲು ಪಾಂಡವರ ಮೇಲೆ ಬಿದ್ದರು. ವೀರ ಅಭಿಮನ್ಯು ಚಕ್ರವ್ಯೂಹವನ್ನು ಭೇದಿಸಿ ಕರ್ಣ, ದುರ್ಯೋ ದನ, ಶಕುನಿ ಮುಂತಾದವರೊಂದಿಗೆ ಯುದ್ಧ ಮಾಡಲು ಬರುವನು. ನೆರೆದ ಜನರು ಅಭಿಮನ್ಯು ರಂಗಸ್ಥಳಕ್ಕೆ ಬರುವುದನ್ನು ಉತ್ಸಾಹದಿಂದ ಕಾದಿದ್ದರು. ದೀಪದವರು ಬತ್ತಿಯನ್ನು ಸರಿಮಾಡಿ ಎಣ್ಣೆ ಹಾಕಿ ಸಿದ್ಧರಾಗಿದ್ದರು. ದೀವಿಗೆ ಗಳು ಜೋರಾಗಿ ಉರಿಯುತ್ತಿದ್ದವು. 'ಚಂಡೆ' ಯ ಶಬ್ದಕ್ಕೆ ಜನರ ಮೈರಕ್ತ ಬಿಸಿ ಏರುತ್ತಿತ್ತು. ಮೇಳದವರು ವೀರರಸದ ಯಕ್ಷಗಾನವನ್ನು ಹಾಡುತ್ತಿ ದ್ದರು.

ಕೌರವರು ತಮ್ಮ ಪರಾಕ್ರಮದೊಂದಿಗೆ ರಂಗಸ್ಥಳಕ್ಕೆ ಯುದ್ಧ ಸನ್ನದ್ಧ ರಾಗಿ ಬಂದರು. ಇನ್ನು ಅಭಿಮನ್ಯು ಬರಬೇಕು. ಕೌರವರು ಬಂದ ದಾರಿಯನ್ನೇ ಜನರು ಎದುರು ನೋಡುತ್ತಿದ್ದರು. ದಾರಿಯ ಪಕ್ಕದಲ್ಲಿ ಮೇಳದವರಿಗೆ ಕುಳಿತುಕೊಳ್ಳಲು ಒಂದು ಮಂಚ ಇರಿಸಿತ್ತು. ಕಿರೀಟ ಧಾರಿಯಾದ ವ್ಯಕ್ತಿಯೊಂದು ಚಿಮ್ಮಿ ಮಂಚವನ್ನು ಹತ್ತಿ ಕೇಕೆ ಹಾಕಿತು. ಜನರ ಗಮನ ಆ ಕಡೆ ಮಡಿಯಿತು. ಅವನೇ ವೀರ ಅಭಿಮನ್ಯು. ಅಲ್ಲಿಂದಲೇ ಗರ್ಜಿಸಿದ. ಜನರು ಸರಿಯಾಗಿ ನೋಡುವ ಮುಂಚೆ ಅಲ್ಲಿಂದ ರಂಗಸ್ಥಳಕ್ಕೆ ಧುಮಿಕಿದ.

ಅಭಿಮನ್ಯುವಿನ ಅಭಿನಯ, ಯುದ್ಧಕೌಶಲ್ಯ ಇತ್ಯಾದಿಯನ್ನು ನೋಡಿ ಜನರು ಮೂಕರಾದರು. ಕೌರವಪಕ್ಷದ ಮಹಾರಥರಿಗೂ ಅಭಿ ಮನ್ಯುವಿಗೂ ಕೈ ಕೈ ಹತ್ತಿತು. ಗರ್ಜನೆ, ಬಾಣ ಬಿಲ್ಲುಗಳ ಶಬ್ದ ಆಕಾಶ

ವನ್ನೇ ವ್ಯಾಪಿಸಿತು. ಕೌರವರು ಎಷ್ಟೇ ಪ್ರಯತ್ನಪಟ್ಟರೂ ಅಭಿಮನ್ಯು ಸೋಲುತ್ತಿರಲಿಲ್ಲ. ನಿಜವಾಗಿಯೂ ಯುದ್ಧ ನಡೆಯುತ್ತಿದೆಯೋ ಎನ್ನುವಂತೆ ಭಯಂಕರವಾಗಿತ್ತು. ಜನಸಮುದಾಯ ಮೈಮರೆತು ವೀರರಸದಲ್ಲಿ ಲೀನವಾಯಿತು. ವೀರ ಅಭಿಮನ್ಯು ರಂಗಸ್ಥಳವನ್ನು ಹುಡಿಯೆಬ್ಬಿಸಿದ. ವಿಪಕ್ಷದ ಎದುರಾಳಿಗಳು ತಣ್ಣಗಾದರು. ಎಷ್ಟು ಪ್ರಯತ್ನಪಟ್ಟರೂ ಅಭಿಮನ್ಯು ಸೋಲುವುದಿಲ್ಲ. ಮಹಾರಥಿಗಳು ಒಟ್ಟು ಸೇರಿ ಅಭಿಮನ್ಯುವನ್ನು ಕೊಲ್ಲುವ ಬದಲು ಓಡಿಹೋಗುವ ಯೋಚನೆಯಲ್ಲಿದ್ದರು. ರಂಗಸ್ಥಳದಿಂದ ಓಡಿಹೋಗುವುದು ಅಧರ್ಮ ಎಂಬ ಅಂಜಿಕೆಯಿಂದ ನೆಪಮಾತ್ರಕ್ಕೆ ಯುದ್ಧ ಮಾಡುವವರಂತೆ ನಟನೆ ಹೂಡಿದರು.

ಜನರು ನೋಡುತ್ತಿದ್ದ ಹಾಗೆ ತಿರುಗಿ ಮೂರುಜನ ರಂಗಸ್ಥಳ ನುಗ್ಗಿದರು. ಇವರು ಯಾರು ಎಂದು ಯೋಚನೆ ಮಾಡುತ್ತಿರುವಾಗಲೇ ಕೌರವಪಕ್ಷದ ವೀರರ ಕೈಯಿಂದ ಆಯುಧಗಳನ್ನು ಕಿತ್ತುಕೊಂಡು ಅಭಿಮನ್ಯುವಿನೊಂದಿಗೆ ಯುದ್ಧ ಪ್ರಾರಂಭಿಸಿದರು. ಧಾಳಿ, ಪ್ರತಿಧಾಳಿ ಸಮಗ್ರೈಯಾಯಿತು. ಯಾರು ಸೋಲುವರು, ಯಾರು ಗೆಲ್ಲುವರು ಎಂದು ಹೇಳುವುದು ಕಷ್ಟವಾಗಿತ್ತು. ಹೀಗೆ ಆಟ ನಡೆಯುತ್ತಿರುವಾಗ ಅಭಿಮನ್ಯುವಿನ ನಿಜರೂಪವನ್ನು ಮೊದಲು ಕಂಡುಹಿಡಿದವನು ಮಾಸ್ಟರ ಮಗ. ಆಟವನ್ನು ನೋಡುತ್ತಿದ್ದವನು ಇದ್ದಕ್ಕಿದ್ದ ಹಾಗೆ "ಅಯ್ಯೋ! ಇವನು ಹೊನ್ನುಗದ್ದೆ ದ್ಯಾವಪ್ಪ" ಎಂದು ಕೂಗಿಕೊಂಡ.

ಈ ಅದ್ಭುತ ಆಟವನ್ನು ಮನಸ್ಸಿಟ್ಟು ನೋಡುತ್ತಾ ಹೊನ್ನುಗದ್ದೆ ತಮ್ಮಯ್ಯಗೌಡರು ಕುಳಿತಿದ್ದರು. ಮಾಸ್ಟರ ಮಗ ಕೂಗಿಕೊಂಡ ಕೂಡಲೆ ವೇಷ ಕಟ್ಟಿಕೊಂಡು ಕುಣಿಯುವವನು ತನ್ನ ತಮ್ಮನೆಂದು ಅವರಿಗೆ ಗೊತ್ತಾಯಿತು. ತನ್ನ ತಮ್ಮ ತನ್ನ ಮುಂದೆ ನಮ್ಮ ವಂಶದವರು ಯಾರೂ ಮಾಡದಿರುವುದನ್ನು ಮಾಡುತ್ತಾನೆಂದು ರೇಗಿ ರಂಗಸ್ಥಳ ನಡಗುವ ರೀತಿಯಲ್ಲಿ ಗರ್ಜಿಸಿದರು. ಇದುವರೆಗೂ ತಮ್ಮ ಮಾಡಿದ ಗರ್ಜನೆಗಿಂತ ಅಣ್ಣನ ಗರ್ಜನೆ ನೂರ್ಮಡಿಯಾಯಿತು. ಇನ್ನು ಇಲ್ಲಿದ್ದರೆ ತನಗೆ ಕ್ಷೇಮವಿಲ್ಲ ಎಂದು ಬಿಲ್ಲು, ಬಾಣ, ಕಿರೀಟಗಳನ್ನು ಅಲ್ಲಿಯೇ ಎಸೆದು ರಂಗಸ್ಥಳದಿಂದ 'ಚಿಮ್ಮಿ' ಅದೃಶ್ಯನಾದ.

# ೫. ಪ್ರಾಣಕ್ಕಿಂತಲೂ ಜೇನುತುಪ್ಪ ಸಿಹಿ

ರಂಗಸ್ಥಳದಿಂದ ಹೊರಟ ದ್ಯಾವಪ್ಪ ಮನೆಗೆ ಹೋಗದೆ ನಾಗಯ್ಯನ ಜೊತೆ ನೆಟ್ಟಗೆ ಬಿಸಿಲುಮನೆಗೆ ಹೋದ. ಆ ದಿನ ಸ್ಕೂಲಿಗೂ ಹೋಗಲಿಲ್ಲ. ಬಿಸಿಲುಮನೆಯಲ್ಲುಳಿದ. ಸಾಯಂಕಾಲದವರೆಗೂ ಹಾಗೂ ಹೀಗೂ ಕಳೆಯಿತು. ಬೈಗಿನ ಹೊತ್ತಿನಲ್ಲಿ ಮನೆಯಕಡೆ ಹೊರಟ. ಮನೆಗೆ ಬಂದವನಿಗೆ ಹೆಬ್ಬಾಗಿಲಿನಿಂದ ಒಳಗೆ ಹೋಗಲು ಧೈರ್ಯ ಬರಲಿಲ್ಲ. ಹಿತ್ತಿಲಕಡೆಯಿಂದ ಮನೆಯೊಳಗೆ ಬಂದ. ಜಗುಲಿಯ ಮೇಲೆ ದೀಪ ಉರಿಯುತ್ತಿತ್ತು ; ತಮ್ಮಯ್ಯಗೌಡರು ಕುಳಿತಿದ್ದರು. ನಾಲ್ಕೈದುಮಂದಿ ದ್ಯಾವಪ್ಪನನ್ನು ಹುಡುಕುವುದಕ್ಕೆ ಹೋದವರು ಬಂದು ಹುಡುಕಿದ ಕಥೆಯನ್ನು ಹೇಳುತ್ತಿದ್ದರು. ದ್ಯಾವಪ್ಪ ಮೆಲ್ಲಗೆ ತಾಯಿಯ ಕೋಣೆಗೆ ಹೋದ. ತಾಯಿ ಚಾಪೆಯಮೇಲೆ ಮಲಗಿದ್ದರು. ದ್ಯಾವಪ್ಪ ಅವರ ಪಕ್ಕದಲ್ಲಿ ಕುಳಿತುಕೊಂಡ. ತಾಯಿ ಸುಮ್ಮನೆ ಮಲಗಿದ್ದರು. ದ್ಯಾವಪ್ಪ ಕೇಳಿದ, "ನಾನು ಆಟದಲ್ಲಿ ವೇಷ ಹಾಕಿದ್ದು ತಪ್ಪೇನವ್ವಾ ?"

ಮಲಗಿಕೊಂಡಲ್ಲಿಯೇ ತಾಯಿ ಹೇಳಿದರು : "ತಪ್ಪೆಂದು ಯಾರು ಹೇಳಿದರು ? ಎಲ್ಲ ನಾನು ಪಡೆದುಕೊಂಡು ಬಂದ ಪುಣ್ಯ. ಮನೆಗೆ ಬರದೆ ಕಾಡುಬಿದ್ದರೆ ಏನುಮಾಡುವುದು ? ರಾತ್ರಿ ಹಂದಿ ಎಂದು ಕೆಳಮನೆ ಪುಟ್ಟಣ್ಣ ನಿನ್ನ ಕೋವಿಯಿಂದ ಹೊಡೆಯುವುದಕ್ಕೆ ಮಾಡಿದ್ದನಂತೆ. ನೀನು ಮಾಡುವುದು ಇದೇ ಕೆಲಸವೇ ?''

ದ್ಯಾವಪ್ಪ ಯಾವ ಉತ್ತರವನ್ನೂ ಕೊಡಲಿಲ್ಲ.

ಮಾರನೆಯ ದಿನ ಸ್ಕೂಲಿಗೆ ಹೋದಾಗ ಹುಡುಗರೆಲ್ಲ ದ್ಯಾವಪ್ಪನನ್ನು ಮುತ್ತಿಕೊಂಡರು. ಅವನ ಅಭಿನಯವನ್ನು ನೋಡಿದ ಉಪಾಧ್ಯಾಯರೂ ಹೊಗಳಿದರು. ಅವುಗಳೊಂದೂ ದ್ಯಾವಪ್ಪನಿಗೆ ಬೇಕಿರಲಿಲ್ಲ. ಮನಸ್ಸಿನಲ್ಲಿ ಅಂದುಕೊಂಡ—ಎಲ್ಲರೂ ನನ್ನನ್ನು ಹೊಗಳುತ್ತಾರೆ, ನನ್ನ ಅಣ್ಣ ಏಕೆ ನನ್ನಮೇಲೆ ರೇಗುವುದು ?

ಪರೀಕ್ಷೆ ಸಮೀಪಿಸಿತು. ಹುಡುಗರು ಆಟಪಾಟಗಳನ್ನು ಬದಿಗಿಟ್ಟು ಓದುವುದರಲ್ಲಿ ಮಗ್ನರಾದರು. ದ್ಯಾವಪ್ಪನೂ ರಾತ್ರಿ ಹಗಲು ಓದುವುದುರಲ್ಲಿ ನಿರತನಾದ.

ಪರೀಕ್ಷೆಯ ಮುಂಚೆ ಸರಸ್ವತಿಪೂಜೆ ಮಾಡುವುದು ಆ ಸ್ಕೂಲಿನ ಹುಡುಗರಲ್ಲಿ ಬಹಳ ದಿನಗಳಿಂದಲೂ ನಡೆದುಬಂದ ರೂಢಿ. ದ್ಯಾವಪ್ಪ ಮತ್ತು ಆತನ ತರಗತಿಯ ಹುಡುಗರು ಎರಡುಮೈಲಿ ದೂರದಲ್ಲಿರುವ ತುಂಗಾನದಿಯ ತೀರದಲ್ಲಿರುವ ಮಾವಿನತೋಪಿನಲ್ಲಿ ಪೂಜೆ ನೆರವೇರಿಸ ಬೇಕೆಂದು ನಿಶ್ಚಯಿಸಿದರು. ಈ ಸರಸ್ವತಿಯ ಮಕ್ಕಳು ಪೂಜೆಗೆ ಹೋಗು ತ್ತಿರುವಾಗ ದಾರಿಯಲ್ಲಿ ಸೌತೇಕಾಯಿಯ ಹಿತ್ತಿಲು ಕಣ್ಣಿಗೆ ಬಿತ್ತು. ಪ್ರಸಾದ ಹಂಚುವುದಕ್ಕೆ ಸೌತೇಕಾಯಿ ಕೋಸುಂಬರಿ ಉತ್ತಮ ಎಂದು ಕೆಲವು ಮಂದಿ ಸಲಹೆ ಕೊಟ್ಟರು. ಹಿತ್ತಿಲ ನುಗ್ಗಿ ಕಾಯಿ ಕೊಯ್ಯಲು ಒಬ್ಬರೂ ಮುಂದೆ ಬರಲಿಲ್ಲ. ದ್ಯಾವಪ್ಪ ಹಿತ್ತಲು ನುಗ್ಗಿದ. ಅವನ ಹಿಂದೆ ಹುಡುಗರ ತಂಡವೂ ನುಗ್ಗಿತು. ಒಬ್ಬ ಒಂದು ಕಿತ್ತ, ಕೆಲವರು ಎರಡನ್ನು ಕಿತ್ತರು, ಕೆಲವರು ಮೂರು. ಒಂದು ಕ್ಷಣದಲ್ಲಿ ಹೂವು, ಮಿಡಿ, ಕಾಯಿ ಗಳಿಂದ ತುಂಬಿದ ಹಿತ್ತಿಲು ಬರಿದಾಯಿತು. ಹಿತ್ತಿಲಿನಿಂದ ಹೊರಗೆ ಬರು ವಾಗ ಕೋಸುಂಬರಿಗೆ ಒಬ್ಬರ ಕೈಯಲ್ಲಿಯೂ ಸೌತೇಕಾಯಿ ಇರಲಿಲ್ಲ. ಅಲ್ಲಿಂದ ಎಲ್ಲರೂ ಮಾವಿನತೋಪಿಗೆ ಹೋಗಿ ಸರಸ್ವತಿಯ ಪೂಜೆಯನ್ನು ನೆರವೇರಿಸಿದರು. ಪೂಜೆಯ ತರುವಾಯ ವಿಹಾರಕ್ಕಾಗಿ ವಿದ್ಯಾರ್ಥಿಗಳ ಗುಂಪು ನದಿ ತೀರದಲ್ಲಿ ಹಾವಳಿಯನ್ನು ಎಬ್ಬಿಸಿತು. ನದಿಯ ದಂಡೆಯ ಮೇಲೆ ಹಾವಳಿಮಾಡುತ್ತಾ ಗುಂಪು ಸೇತುವೆಯ ಕೆಳಗೆ ಹೋಯಿತು.

ಸೇತುವೆಯ ಕೆಳಗೆ ಒಂಡೆ. ಆದರಮೇಲೆ ಸುಟ್ಟ ಕಟ್ಟಿಗೆಯ ತುಂಡು, ಬೂದಿ ಬಿದ್ದಿವೆ. ಅದನ್ನು ನೋಡಿ ಒಬ್ಬೊಬ್ಬರು ಒಂದೊಂದು ರೀತಿ ಮಾತಾಡಿಕೊಂಡರು.

"ಯಾರೋ ಒಂ ತಸಾರಿ ಚಳಿಕಾಯಿಸಿರಬೇಕು", ಒಬ್ಬ ಹುಡುಗ ಹೇಳಿದ.

ಅವನ ಬುದ್ಧಿಗೆ ಎರಡನೆಯವನು ನಕ್ಕು ಹೇಳಿದ, "ಚಳಿಕಾಯಿಸಲು ಹೊಳೆಗೆ ಬರುತ್ತಾರೆಯೇ? ಬೆಂಕಿ ಕಾಯಿಸುವವರು ನದಿ ದಂಡೆಯ ಮೇಲೆ ಬೆಂಕಿ ಹಾಕುತ್ತಾರೆ. ದಂಡೆಯಿಂದ ಕಟ್ಟಿಗೆ ತಂದು ಇಲ್ಲಿ ಯಾರೂ ಬೆಂಕಿ ಹಾಕುವುದಿಲ್ಲ."

ಮೂರನೆಯ ಹುಡುಗ ಮಧ್ಯೆ ಬಾಯಿಹಾಕಿದ, "ಮೀನು ಹಿಡಿಯುವುದಕ್ಕೆ ಬಂದವರಿಗೆ ಚಳಿಯಾಗಿರಬಹುದು. ಇದು ಅವರ ಕೆಲಸ."

ಮೊದಲನೆಯ ಹುಡುಗ ನಿರೋಧಿಸಿದ, "ಬೆಂಕಿ ಕಂಡರೆ ಮೀನು ಓಡಿಹೋಗುತ್ತವೆ. ಮೀನು ಹಿಡಿಯುವುದಕ್ಕೆ ಬಂದವರು ಬೆಂಕಿ ಹಾಕಿಕೊಂಡರೆ ಮೀನು ಹಿಡಿದ ಹಾಗೆಯೆ!"

"ಪಿಕ್‌ನಿಕ್ಕಿಗೆ ಯಾರೋ ಬಂದಿರಬಹುದು" ಇನ್ನೊಬ್ಬ ಹುಡುಗ ಹೇಳಿದ.

ಹುಡುಗರೆಲ್ಲ ಅವನ ಮಾತಿಗೆ ನಕ್ಕರು. ಕುಳಿತುಕೊಳ್ಳಲು ಸ್ಥಳವಿಲ್ಲ; ನೆರಳಿಲ್ಲ; ಕೊಳಕು ನೀರು. ಸೊಗಸಾದ ಮಾವಿನ ತೋಪಿರುವಾಗ ಇಲ್ಲಿಗೆ ಯಾರು ಬರುವರು?

ಬೆಂಕಿಹಾಕಿದ್ದರ ನಿಜವಾದ ಸಂಗತಿ ದ್ಯಾವಪ್ಪನಿಗೆ ಹೊಳೆಯಿತು. ಸೇತುವೆಯ ಕೆಳಭಾಗದಲ್ಲಿ ಕಬ್ಬಿಣದ ತೊಲೆಗೆ ಹೆಜ್ಜೇನು ಗೂಡುಕಟ್ಟಿದೆ. ಅದರಡಿಯಲ್ಲಿ ಬೆಂಕಿ ಹಾಕಿದೆ. ಅವನು ಹೇಳಿದ "ಯಾರೋ ಜೇನು ಕೀಳುವುದಕ್ಕೋಸ್ಕರ ಬೆಂಕಿ ಹಾಕಿದಾರೆ."

ಜೇನು ತಿನ್ನುವುದರ ಕಡೆ ಎಲ್ಲರ ಗಮನವೂ ಹೋಯಿತು. ಜೇನು ಸುಮಾರು ಮೂವತ್ತು ಅಡಿ ಎತ್ತರದ ಸೇತುವೆಯ ಕೆಳಭಾಗದಲ್ಲಿ ಕಟ್ಟಿದೆ. ಇವರು ನದಿಯಲ್ಲಿ ಹಾಸುಬಂಡೆಯಮೇಲೆ ನಿಂತುಕೊಂಡು ಜೇನುತಿನ್ನಲು ಹಾತೊರೆಯುತಿದಾರೆ.

ಹಿಂದಿನ ದಿನ ಅನೇಕಮಂದಿ ದೊಡ್ಡವರು ಜೇನುಕೀಳಲು ಬಹಳ ಪ್ರಯತ್ನಪಟ್ಟರು. ಅವರಿಂದ ಸಾಧ್ಯವಾಗಿರಲಿಲ್ಲ.

ಹುಡುಗರು ಕೆಳಗೆ ಸೊಪ್ಪುಸದೆ ಕೂಡಿಸಿ ಬೆಂಕಿಹಾಕಿದರು. ಹೊಗೆ ಐದಾರು ಅಡಿ ಎತ್ತರ ಕೂಡ ಹೋಗಲಿಲ್ಲ. ಉದ್ದನೆ ಗಳು ಕಡಿದು ಅದರ ತುದಿಗೆ ಕಡ್ಡಿ ಕಟ್ಟಿ ಬೆಂಕಿಹತ್ತಿಸಿ ಹಿಡಿಯುವರು. ಮೇಲಕ್ಕೆ ಎತ್ತುವುದರೊಳಗೆ ಬೆಂಕಿ ಆರಿಹೋಗುತ್ತಿತ್ತು. ಹೊಗೆ ಒಂದು ಅಡಿ ಕೂಡ ಹೋಗುತ್ತಿರಲಿಲ್ಲ. ಹೀಗೆ ಬಹಳಹೊತ್ತು ಪ್ರಯತ್ನಪಟ್ಟರು. ಏನೂ ಸಾರ್ಥಕವಾಗಲಿಲ್ಲ. ಕಲ್ಲುಗಳನ್ನು ಎಸೆದರು. ಕೆಲವರ ಕಲ್ಲು ಜೇನುಗೂಡಿಗೆ ತಗಲಿತು.

ಹುಳುಗಳು ಭೋರೆಂದು ಹಾರಾಡಿದವು. ಗೂಡಿನಿಂದ ಜೇನುತುಪ್ಪ ತೊಟ್ಟಿಕ್ಕಲು ಪ್ರಾರಂಭಿಸಿತು.

ಜೇನುದುಂಬಿಗಳು ಭೋರೆಂದು ಹಾರಿದ ತಕ್ಷಣ ತಮ್ಮನ್ನು ಅಟ್ಟಿಸಿಕೊಂಡು ಬರುವುವೆಂದು ಹುಡುಗರು ದಿಕ್ಕಾಪಾಲಾಗಿ ಓಡಿದರು. ಕೆಲವರು ಸೇತುವೆಯ ಕಂಭದ ಮರೆಯಲ್ಲಿ ಅಡಗಿದರು. ಕೆಲವರು ನೀರಿಗೆ ಧುಮುಕಿದರು. ಇನ್ನು ಕೆಲವರು ನದಿಯ ದಂಡೆಯ ಪೊದೆಯಲ್ಲಿ ಹುದುಗಿಕೊಳ್ಳಲು ಓಟ ಕಿತ್ತರು.

ಪ್ರಾಣಕ್ಕಿಂತಲೂ ಜೇನುತುಪ್ಪ ಸಿಹಿ ಎನ್ನುವ ಹುಡುಗರೂ ಆ ಗುಂಪಿನಲ್ಲಿದ್ದರು. ಗೂಡಿನಿಂದ ಜೇನುತುಪ್ಪ ಸೋರುವುದನ್ನು ನೋಡಿ ಅಲ್ಲಿಂದ ಹೋಗಲು ಅವರಿಂದ ಸಾಧ್ಯವಾಗಲಿಲ್ಲ. ಜೇನುತುಪ್ಪ ಸೋರುತ್ತಿರುವ ಸ್ಥಳದಲ್ಲಿ ಬಾಯಿ ತೆರೆದುಕೊಂಡು ನಿಂತರು. ಆಗ ಕೆಲವು ಸಾರಿ ತುಪ್ಪದ ಹನಿಗಳು ಕಣ್ಣಿಗೆ ಬೀಳುವುವು; ಕೆಲವು ಸಾರಿ ಮುಖದಮೇಲೆ; ಕೆಲವು ಸಾರಿ ತಲೆಯಮೇಲೆ. ಕೆಲವರು ಕೈಗಳನ್ನು ಮೇಲೆತ್ತಿ ಹಿಡಿದರು. ಹೀಗೆ ಸ್ವಲ್ಪಹೊತ್ತು ಸುಗ್ಗಾಟ ನಡೆಯಿತು.

ಭೋರ್ಗರೆಯುತ್ತಾ ಹಾರಾಡಿದ ಜೇನುಹುಳು ಹತ್ತು ನಿಮಿಷದ ತರುವಾಯ ಗೂಡುಬಿಟ್ಟು ಒಂದುಮಾರು ದೂರದಲ್ಲಿ ಕೂತುಕೊಂಡವು. ಹುಡುಗರಿಗೆ ಇನ್ನೂ ಆಶೆ ಹುಟ್ಟಿತು. ನೀರಿನಲ್ಲಿ ಮುಳುಗಿ ಬಟ್ಟೆಯನ್ನೆಲ್ಲ ಒದ್ದೆಮಾಡಿಕೊಂಡವರು ತಿರುಗಿ ಮೇಲಕ್ಕೆ ಬಂದು ಗೂಡಿನಡಿ ಇದ್ದವರ ಜೊತೆ ಸೇರಿದರು. ಜೇನುತುಪ್ಪದ ಸುಗ್ಗಾಟದಲ್ಲಿ ದ್ಯಾವಪ್ಪನು ಸೇರಿದ. ಅಲ್ಲಿ ಬಾಯಿಸಿಹಿಗಿಂತ ಮೈಗೆ ನೋವು ಹೆಚ್ಚಾಯಿತು. ಇದು ನೋಡಿ ಅವನು ಗುಂಪಿನಿಂದ ಸರಿದು ದೂರ ನಿಂತ. ನಿಂತವನಿಗೆ ಸುಮ್ಮನಿರಲು ಸಾಧ್ಯವಾಗಲಿಲ್ಲ. ಇಷ್ಟುಮಂದಿ ಸ್ನೇಹಿತರು ಕೆಲವು ಹನಿ ಜೇನುತುಪ್ಪಕ್ಕಾಗಿ ಕಾದಾಡುತ್ತಿದ್ದಾರೆ, ಏನುಮಾಡುವುದು ಎಂದು ಸ್ವಲ್ಪಹೊತ್ತು ಯೋಚಿಸಿದ. ಕೆಳಗಿನಿಂದ ಸೇತುವೆಯನ್ನು ದಿಟ್ಟಿಸಿದ. ಏನೋ ಹೊಳೆಯಿತು. ಹತ್ತಿರದಲ್ಲೇ ದಡದಲ್ಲಿ ಹಬ್ಬಿದ ಹಂಬುಗಳನ್ನು ಕಿತ್ತುಕೊಂಡು ಸೇತುವೆಯ ಮೇಲೆ ಬಂದ. ಜೇನು ಗೂಡು ಕಟ್ಟಿರುವ ಸ್ಥಳದ ಹತ್ತಿರ ಹಂಬುಗಳನ್ನು ಕಬ್ಬಿಣದ ಸರಳಿಗೆ ಕಟ್ಟಿ ಅದರ ಸಹಾಯದಿಂದ ಕೆಳಗೆ

ಜೋಲುಬಿದ್ದ. ಕಬ್ಬಿಣದ ತೊಲೆ ಕಾಲಿಗೆ ಸಿಕ್ಕಿತು. ಅಲ್ಲಿಯೇ ಕುಳಿತು ಕೊಂಡ. ಜೇನಿನ ಗೂಡು ಅದರ ಪಕ್ಕದಲ್ಲಿರುವ ಇನ್ನೊಂದು ಕಬ್ಬಿಣದ ತೊಲೆಯಲ್ಲಿ ಒಂದೂವರೆ ಮಾರು ದೂರದಲ್ಲಿ ಇತ್ತು. ಕುಳಿತ ತೊಲೆಯ ಪಟ್ಟಿಯ ಮೇಲೆ ಮೆಲ್ಲಗೆ ತೆವಳಿಕೊಂಡು ಹೋದ.

ಹನಿಯಾಗಿ ಬೀಳುತ್ತಿದ್ದ ಜೇನುತುಪ್ಪಕ್ಕಾಗಿ ಒಬ್ಬರನ್ನೊಬ್ಬರು ನೂಕಾಡುತ್ತಿದ್ದ ಹುಡುಗರು ದ್ಯಾವಪ್ಪನನ್ನು ನೋಡಲಿಲ್ಲ. ದ್ಯಾವಪ್ಪ ಜೇನಿನ ಹಲ್ಲೆಗೆ ಕೈಹಾಕಿದ ತಕ್ಷಣ ತುಪ್ಪದಿಂದ ತುಂಬಿದ ಗೂಡಿನಿಂದ ಜೇನುತುಪ್ಪ ಹೆಚ್ಚಾಗಿ ಸೋರಲು ಪ್ರಾರಂಭವಾಯಿತು. ಮೇಲೆ ನೋಡಿ ದರೆ ದ್ಯಾವಪ್ಪ. ಅವರ ಆನಂದಕ್ಕೆ ಪಾರವೇ ಇಲ್ಲ. ಹುಡುಗರೆಲ್ಲ "ದ್ಯಾವಪ್ಪ ನನಗೆ! ದ್ಯಾವಪ್ಪ ನನಗೆ!!" ಎಂದು ಕೂಗಿಕೊಳ್ಳಲು ಪ್ರಾರಂಭಿಸಿದರು. ಬರಿ ಕೈಯಲ್ಲಿ ಹೋಗಿರುವ ದ್ಯಾವಪ್ಪ ಏನುತಾನೆ ಮಾಡಿಯಾನು. ಕೊಯ್ಯಲು ಕತ್ತಿ ಇಲ್ಲ; ಇಡಲು ಪಾತ್ರೆ ಇಲ್ಲ. ಕೋತಿ ಜೇನು ತಿಂದಹಾಗಾಯಿತು.

ಕೀಳಲು ಜೇನಿನ ಹಲ್ಲೆಗೆ ಕೈಹಾಕಿದ ಕೂಡಲೇ ತುಪ್ಪ ಧರಧರನೆ ಸುರಿಯುವುದು. ಕೆಳಗಿದ್ದ ಹುಡುಗರ ಸ್ಥಿತಿ ಹೇಳಲು ಅಸಾಧ್ಯ. ಕೆಲವರ ಮುಖವೆಲ್ಲ ತುಪ್ಪದಿಂದ ತುಂಬಿಹೋಯಿತು. ಕೆಲವರ ತಲೆಯೆಲ್ಲ ಒದ್ದೆ ಯಾಯಿತು. ದ್ಯಾವಪ್ಪ ಜೇನಿನ ಹಲ್ಲೆಯನ್ನು ಕಿತ್ತುಕಿತ್ತು ಹಾಕಿದ.

---

## ೬. ಬಂದನಾಹುಲಿರಾಯ

ಸರಸ್ವತಿಪೂಜೆಗೆ ಅಂದು ಹೊರಟ ಈ ಗುಂಪು ಸೌತೆಕಾಯಿ ಹಿತ್ತಿ ಲನ್ನು ಲೂಟಿ ಎಬ್ಬಿಸಿ, ಜೇನುಕಿತ್ತು ಕೈಮೈಯನ್ನೆಲ್ಲಾ ಮಾಡಿಕೊಂಡು ಕಪ್ಪುಕವಿಯುವ ಹೊತ್ತಿಗೆ ರಸ್ತೆಯಮೇಲೆ ಊರಿನಕಡೆ ಹೊರಟಿತು.

ಅಮಾವಾಸ್ಯೆಯ ಹಿಂದಿನ ದಿನ; ಕಣ್ಣನ್ನು ತಿವಿಯುವ ಕತ್ತಲು; ಮನೆಗೆ ಹೊತ್ತಾಯಿತು ಎಂಬ ತವಕ. ಒಬ್ಬರ ಮುಖ ಒಬ್ಬರಿಗೆ ಕಾಣಿ

ಸದು. ಹುಡುಗರು ನಗುತ್ತಾ ಕುಣಿಯುತ್ತಾ ಬರುತ್ತಿದ್ದರು. ಯಾರೋ ಗಟ್ಟಿಯಾಗಿ ಕೂಗಿದ ಧ್ವನಿ ಕೇಳಿಸಿತು. ಕೂಗು ಕೇಳಿಸುತ್ತಲೆ ಹುಡುಗರೆಲ್ಲ ಓಡಲು ಪ್ರಾರಂಭಿಸಿದರು. ದ್ಯಾವಪ್ಪನಿಗೆ ಇವರು ಓಡುವುದು ಅರ್ಥವಾಗಲಿಲ್ಲ. ಅವರನ್ನು ನಿಲ್ಲಿಸಿ, "ಏಕೆ ಓಡುತ್ತಿದ್ದೀರಿ ?" ಎಂದ. ಅವರಲ್ಲಿ ಒಬ್ಬ ಹೇಳಿದ, "ಯಾರೋ ಕೂಗಿದರು ಅದಕ್ಕೋಸ್ಕರ."

"ಯಾರೋ ಕೂಗಿದರೆ ನಾವು ಏಕೆ ಓಡುವುದು ?" ದ್ಯಾವಪ್ಪ ಕೇಳಿದ.

"ಮಧ್ಯಾಹ್ನ ಸೌತೇಕಾಯಿ ಕಿತ್ತು ತಿಂದೆವಲ್ಲ, ಆ ಹಿತ್ತಲಿನವರಿರಬೇಕು. ಮಧ್ಯಾಹ್ನದಿಂದ ನಮ್ಮನ್ನು ಹುಡುಕುತಿದ್ದಿರಬಹುದು. ನಮ್ಮ ಮಾತನ್ನು ಕೇಳಿ ಸಹಾಯಕ್ಕೆ ಜನರನ್ನು ಕೂಗುತಿರಬಹುದು" ಎಂದು ಇನ್ನೊಬ್ಬ ಹುಡುಗ ಹೇಳಿದ.

ಅವರ ಮಾತನ್ನು ಕೇಳಿ ದ್ಯಾವಪ್ಪನಿಗೆ ನಗು ಬಂತು. ಅವರಿಗೆ ಸಮಾಧಾನ ಹೇಳಿದ, "ಹಿತ್ತಿಲಿನಲ್ಲಿ ಬೆಳೆದ ಕಬ್ಬು, ಸೌತೇಕಾಯಿ ಮುಂತಾದ ತಿನ್ನುವ ಪಧಾರ್ಥಗಳನ್ನು ಕಿತ್ತು ತಿಂದರೆ ರೈತರು ಎಂದೂ ಕೋಪಿಸುವುದಿಲ್ಲ. ಎಲ್ಲರೂ ಒಂದೇಸಾರಿ ಕಿತ್ತು ತಿಂದುದರಿಂದ ಅವರಿಗೆ ಹೆಚ್ಚು ನಷ್ಟವಾಗಿರುವುದು. ಅದಕ್ಕೆ ನಮಗೆ ಹೊಡೆಯಲು ಬಂದರೆ ಅವರಿಗೆ ಬಲಿಹಾಕಬಹುದು. ನಾವು ಹೋಗುತ್ತಿರುವುದು ಕಾಡಿನಲ್ಲಿ, ಅಕ್ಕಪಕ್ಕದಲ್ಲಿ ಊರಿಲ್ಲ. ಈ ಕತ್ತಲೆಯಲ್ಲಿ ಅವರು ಬಂದರೂ ಏನೂ ಮಾಡುವ ಹಾಗಿಲ್ಲ."

ಇವರೊಳಗೆ ಹೀಗೆ ಮಾತುಕಥೆ ನಡೆಯುತಿರುವಾಗ ತಿರುಗಿ ಕೂಗು ಕೇಳಿಸಿತು. ದ್ಯಾವಪ್ಪ ಗಟ್ಟಿಯಾಗಿ ಕೂಗಿ ಕೇಳಿದ, "ಯಾರದು ?"

"ನಾವು ಇಲ್ಲಿ ಮರದಮೇಲೆ ಕುಳಿತಿದ್ದೇವೆ, ಬನ್ನಿ."

"ನಾವು ಎಂದರೆ ಯಾರು ?"

"ನಾವು ಇಲ್ಲಿಯ ಸ್ಕೂಲ್‌ಮಾಸ್ಟರು."

ಉಪಾಧ್ಯಾಯರ ಧ್ವನಿಯ ಗುರುತು ವಿದ್ಯಾರ್ಥಿಗಳಿಗೆ ಸಿಕ್ಕಿತು. ಧ್ವನಿ ಬಂದಕಡೆ ಹೊರಟರು. ಈ ರಾತ್ರಿ ಉಪಾಧ್ಯಾಯರು ಇಲ್ಲಿ ಏನು ಮಾಡುತ್ತಿರುವರು ಎಂಬ ಕುತೂಹಲ. ರಸ್ತೆ ಬಿಟ್ಟು ಸ್ವಲ್ಪದೂರ ಹುಡುಕಿ

ದರು. ಎಲ್ಲಿಯೂ ಕಾಣಲಿಲ್ಲ. ಅವರಲ್ಲಿ ಒಬ್ಬ "ಸಾರ್! ಸಾರ್!! ಎಲ್ಲಿದ್ದೀರಿ?" ಎಂದು ಕೂಗಿದ.

"ಇಲ್ಲಿ ಮರದ ಮೇಲೆ."

ಮಾಸ್ಟರು ಮರ ಹತ್ತಿರುವುದು ಹುಡುಗರಿಗೆ ತುಂಬಾ ಆಶ್ಚರ್ಯ. ಹುಡುಗರು ಮರ ಹತ್ತುವುದನ್ನು ನೋಡಿದರೆ ಬೈಯುತ್ತಿದ್ದರು. ಇಂದು ಅವರೇ ಹತ್ತಿರುವರು. ಇನ್ನು ತಾವು ಮರ ಹತ್ತಿದರೆ ಮಾಸ್ಟರು ಬೈಯ್ಯುವುದಿಲ್ಲ ಎಂಬ ಧೈರ್ಯ ಹುಡುಗರಿಗೆ.

ಅವರಲ್ಲಿ ಒಬ್ಬನು ಹೇಳಿದ, "ಜೇನು ಕೀಳಲು ಬಂದಿರಬಹುದೇನೋ. "ಇನ್ನೊಬ್ಬನು ಹೇಳಿದ, "ಇದ್ದರೂ ಇರಬಹುದು". ಕೆಲವರು ಇದನ್ನು ಒಪ್ಪಲಿಲ್ಲ.

ತಡವರಿಸಿಕೊಳ್ಳುತ್ತ ಹುಡುಗರು ಉಪಾಧ್ಯಾಯರು ಕುಳಿತಿರುವ ಮರದಡಿ ಹೋದರು. ಕತ್ತಲಿನಲ್ಲಿ ಮರದಿಂದ ಕೆಳಕ್ಕೆ ಇಳಿಯುವುದು ಹೇಗೆ?

"ತಡವರಿಸಿಕೊಂಡು ಮೆಲ್ಲಗೆ ಇಳಿಯಿರಿ ಸಾರ್" ಎಂದು ಒಬ್ಬ ಹುಡುಗ ಹೇಳಿದ.

ಉಪಾಧ್ಯಾಯರು ಹೇಳಿದರು "ಈ ಕತ್ತಲಿನಲ್ಲಿ ಹೇಗಪ್ಪ ಇಳಿಯುವುದು?"

ಹುಡುಗರು ಆ ಕತ್ತಲಿನಲ್ಲಿ ಒಣಗಿದ ಕಸ, ಕಡ್ಡಿ, ಎಲೆ ಸೇರಿಸಿ ಬೆಂಕಿ ಹತ್ತಿಸಿದರು. ಮರದ ಮೇಲಿರುವವರಿಗೆ ಸ್ವಲ್ಪ ಧೈರ್ಯಬಂತು. ಅವರು ಮೆಲ್ಲಗೆ ಇಳಿಯಲು ಪ್ರಯತ್ನಪಟ್ಟರು. ಆಕಸ್ಮಾತ್ತಾಗಿ ಒಬ್ಬ ಉಪಧ್ಯಾಯರ ಕಾಲು ರೆಂಬೆಯಿಂದ ಜಾರಿತು. ಅವರು ಅಲ್ಲಿಯೇ ತತ್ತರಿಸಿ ನಿಂತರು.

ಹುಡುಗರೆಲ್ಲ ಸೇರಿ ಜೋರಾಗಿ ಬೆಂಕಿಹಾಕಿದರು. ದ್ಯಾವಪ್ಪ ಮರ ಹತ್ತಿದ. ಕೆಲವುಮಂದಿ ಹುಡುಗರು ಮರದ ಬುಡದಲ್ಲಿ ನಿಂತುಕೊಂಡರು; ಕೆಲವರು ಅವರ ಭುಜದಮೇಲೆ ಹತ್ತಿ ನಿಂತುಕೊಂಡು ಉಪಧ್ಯಾಯರಿಗೆ ಇಳಿಯಲು ಸಹಾಯ ಮಾಡಿದರು. ಉಪಾಧ್ಯಾಯರು ಮರದಿಂದ ಕೆಳಗೆ ಇಳಿದರು.



ಹುಡುಗರು ಆ ಕತ್ತಲಿನಲ್ಲಿ ಒಣಗಿದ ಕಸ, ಕಡ್ಡಿ, ಎಲೆ ಸೇರಿಸಿ ಬೆಂಕಿ ಹತ್ತಿಸಿದರು

ಹುಡುಗರೊಬ್ಬರಿಗೂ ಅವರು ಮರಹತ್ತಿದ ಕಾರಣ ಗೊತ್ತಾಗಲಿಲ್ಲ. ಅವರೆಲ್ಲರೂ ಭಯಪಟ್ಟಹಾಗೆ ಕಾಣುತ್ತಿದ್ದರು. ಕಾಡಿನಿಂದ ಹಾಗೂ ಹೀಗೂ ದಾರಿಗೆ ಬಂದರು. ಆಗ ಅವರಲ್ಲಿ ಒಬ್ಬ ಉಪಧ್ಯಾಯರು ಹೇಳಿದರು, "ಹೇಳಿ ಕರೆಯಿಸಿದಹಾಗೆ ನೀವು ದೇವರ ದಯೆಯಿಂದ ಬಂದಿರಿ. ಇಲ್ಲದಿದ್ದರೆ ರಾತ್ರಿಯೆಲ್ಲ ಮನೆಮಾರು ಬಿಟ್ಟು ಮರದಮೇಲೆ ಕುಳಿತಿರಬೇಕಿತ್ತು. ಸಾಕಪ್ಪ ನಿಮ್ಮೂರಿನ ಸಹವಾಸ."

ಹುಡುಗರೊಬ್ಬರಿಗೂ ಇದು ತಿಳಿಯಲಿಲ್ಲ. ಕೆಲವರು ಖಿನ್ನರಾದರು. ದ್ಯಾವಪ್ಪ ಕೇಳಿದ, "ಏನು ತೊಂದರೆಯಾಯಿತು ಸಾರ್?"

ಇನ್ನೊಬ್ಬ ಉಪಾಧ್ಯಾಯರು ಹೇಳಿದರು, "ಏನು ಹೇಳುವುದಪ್ಪ! ಗ್ರಹಚಾರ ಇಲ್ಲಿಗೆ ಬಂದಿತು. ಸಾಯಂಕಾಲ ಸುತ್ತಾಡಿಕೊಂಡು ಬರಲು ಮೂರು ಮಂದಿಯೂ ಈ ಕಡೆ ಬಂದೆವು. ಇಲ್ಲಿಯ ಸ್ಥಿತಿಗತಿಗಳ ವಿಚಾರ ಮಾತನಾಡಿಕೊಳ್ಳುತ್ತಾ ಬರುತ್ತಿದ್ದೆವು. ನಮ್ಮ ಗಮನ ಅಕ್ಕಪಕ್ಕದ ಕಡೆಗೆ ಇತ್ತೇ ವಿನಾ ರಸ್ತೆಯಮೇಲಿರಲಿಲ್ಲ. ತಿರುವಿನಲ್ಲಿ ರಸ್ತೆಯ ಮೇಲೆ ಹುಲಿ ಕುಳಿತಿರುವುದನ್ನು ನೋಡಲೇ ಇಲ್ಲ. ಹತ್ತಿರ ಬಂದಮೇಲೆ ಹುಲಿ ನಮ್ಮ ಕಣ್ಣಿಗೆ ಬಿತ್ತು. ಏನುಮಾಡುವುದಕ್ಕೂ ಬುದ್ಧಿ ಓಡಲಿಲ್ಲ. ಅಬ್ಬರಿಸಿ ಕೂಗಿಕೊಂಡೆವು. ಹುಲಿ ಪೊದೆಯಲ್ಲಿ ನುಗ್ಗಿತು. ಗಾಬರಿಯಿಂದ ಏನುಮಾಡುವುದಕ್ಕೂ ಆಗಲಿಲ್ಲ. ಹೋಗಿ ಮರಹತ್ತಿಕೊಂಡೆವು."

ಮರ ಹತ್ತಿದ ಕಾರಣ ತಿಳಿದು ಹುಡುಗರಿಗೆ ಸಮಾಧಾನವಾಯಿತು. ಇನ್ನೊಬ್ಬ ಮಾಸ್ಟರು ಹೇಳಿದರು. "ಅಬ್ಬಾ! ಹುಲಿಯ ನಿಜಸ್ವರೂಪವನ್ನು ನೋಡಬೇಕಾದರೆ ಕಾಡಿಗೆ ಬರಬೇಕು. ಕ್ರೂರವಾಗಿದ್ದರೂ ಎಷ್ಟು ಸುಂದರವಾಗಿರುತ್ತದೆ? ನಾನು ಮ್ಯೂಜಿಯಮ್ಮಿನಲ್ಲಿ ಎಷ್ಟೋ ಹುಲಿಗಳನ್ನು ನೋಡಿರುವೆನು. ಕಾಡಿನಲ್ಲಿ ಹುಲಿಯ ಸ್ವರೂಪವನ್ನು ನೋಡಿದವರಿಗೆ ಮ್ಯೂಜಿಯಮ್ಮಿನ ಹುಲಿ ಹುಲಿಯ ಚರ್ಮವನ್ನು ಹೊದ್ದಿರುವ ಕತ್ತೆಗಳ ಹಾಗೆ ಕಾಣಿಸುವುದು."

ಹೀಗೆ ಮಾತುಕಥೆಯಲ್ಲಿ ದಾರಿ ಕಳೆಯಿತು. ಉಪಾಧ್ಯಾಯರೂ ವಿದ್ಯಾರ್ಥಿಗಳೂ ಊರನ್ನು ತಲಪಿದರು. ಮಾಸ್ಟರನ್ನು ಅವರವರ ಮನೆಗೆ ತಲಪಿಸಿ ಹುಡುಗರು ತಮ್ಮ ಮನೆಗಳಿಗೆ ಹೋದರು.

ರಾತ್ರಿ ತುಂಬಾ ಏರಿತ್ತು. ಹುಡುಗರು ಬಾರದ್ದರಿಂದ ಕದಗಳನ್ನು ಹಾಕದೆ ಮನೆಯವರು ಅವರ ನಿರೀಕ್ಷಣೆಯಲ್ಲಿದ್ದರು. ದ್ಯಾವಪ್ಪ ಮನೆಗೆ ಬಂದಾಗ ತಮ್ಮಯ್ಯಗೌಡರು ಜಗಲಿಯಮೇಲೆ ಕುಳಿತಿದ್ದರು. ಅವರ ಮುಂದೆ ಪಕ್ಕದ ಹಳ್ಳಿಯ ಲಿಂಗಯ್ಯ ಮತ್ತು ಅವನ ಮಗ ಸಿದ್ದಯ್ಯ ನಿಂತಿದ್ದರು. ಲಿಂಗಯ್ಯ ತನ್ನ ಹಿತ್ತಿಲಿನ ಸೌತೇಕಾಯಿ ಕಳುವಾದ ವಿಚಾರ ವನ್ನು ವರ್ಣಿಸುತ್ತಾ ಹೇಳಿದ, "ಹಿತ್ತಿಲಕಾವಲಿಗೆ ನಮ್ಮ ಸಿದ್ದನ ಹಾಕಿದ್ದೆ. ರಾತ್ರಿ ಹಗಲು ಅಲ್ಲೇ ಇರುತ್ತಾನೆ. ಯಾವ ಮಾಯೆಯಲ್ಲಿ ಬಂದು ಕೊಯ್ದು ಕೊಂಡುಹೋದರೋ ಏನೋ!"

ತಮ್ಮಯ್ಯಗೌಡರು ಸಿದ್ದಯ್ಯನನ್ನು ಕೇಳಿದರು, "ಏನೋ ಸಿದ್ದ ನೀನು ಇರಲಿಲ್ಲವೇನೋ?"

"ಇದ್ದೆ ಅಯ್ಯ, ಅವ್ವ ಬರುವುದು ಹೊತ್ತಾಯಿತು. ಬೇಗ ಹೋಗಿ ಒಂದು ಮುಷ್ಟಿ ಊಟಮಾಡಿಕೊಂಡು ಬರೋಣವೆಂದು ಮನೆಗೆ ಹೋಗಿದ್ದೆ. ಬಂದು ಎಲೆಹಾಕುವ ಹೊತ್ತಾಗಿರಬಹುದು. ಅಡಗಿ ಕುಳಿತುಕೊಂಡ ವರು ನಾನು ಹೋದ ಕೂಡಲೇ ಬಂದು ಕೊಯ್ದಿದ್ದಾರೆ."

"ಮಿಡಿ ಈ ವರ್ಷ ಹೇಗೆ ಬಿಟ್ಟಿದ್ದು? ಹತ್ತು ಹದಿನೈದು ಹೆಡಿಗೆ ಕಾಯಿ ಸಿಗುತ್ತಿತ್ತು. ಇವರ ಮನೆ ಹಾಳಾಗುವುದಕ್ಕೆ ಅವರ ಪಾಲಿಗಾ ಯಿತು" ಎಂದು ಲಿಂಗಯ್ಯ ಹೇಳಿದ.

ಗೌಡರು ಕೇಳಿದರು "ನಿನ್ನ ಮನಸ್ಸಿನಲ್ಲಿ ಯಾರಿರಬಹುದು?"

"ಯಾರು! ಬೇರೆ ಊರಿನವರು ಯಾರು ಬರುತ್ತಾರೆ? ನಮ್ಮ ನಂಜನಮನೆಯವರು ಎಂದು ನನ್ನ ಮನಸ್ಸು. ಅವರಿಗೂ ನಮಗೂ ಮನಸ್ಸು ಸರಿಯಿಲ್ಲ. ಹೊಟ್ಟೆಕಿಚ್ಚಿಗೆ ಹೀಗೆ ಮಾಡಿದ್ದಾರೆ."

"ಆಗಲಿ ನಾಳೆ ಅವನ ಕರೆಯಿಸಿ ವಿಚಾರಿಸುತ್ತೇನೆ. ಅಲ್ಲ, ನಮ್ಮ ಹುಡುಗರೊಬ್ಬರೂ ಇನ್ನೂ ಮನೆ ಸೇರಲಿಲ್ಲ. ಅವರೆಲ್ಲಿಯಾದರೂ ಆ ಕಡೆ ಬಂದಿದ್ದರೊ?"

"ಇಲ್ಲಯ್ಯ, ಅವರು ಏಕೆ ಆ ಕಡೆ ಬರುತ್ತಾರೆ? ಒಂದುವೇಳೆ ಬಂದಿದ್ದರೂ ಕೇಳಿ ತೆಗೆದುಕೊಳ್ಳುತಿದ್ದರು. ಅವರದೆ ಹಿತ್ತಿಲು."

ಇದೆಲ್ಲ ದ್ಯಾವಪ್ಪ ಕೇಳಿದ. ಅವರ ಮುಂದೆ ಬರಲು ಅವನಿಗೆ ಧೈರ್ಯ ಬರಲಿಲ್ಲ. ಅದೇ ಹೆಜ್ಜೆಯಲ್ಲಿ ಹಿಂತಿರುಗಿ ಹಿಂಬಾಗಿಲಿನಿಂದ ಒಳಗೆ ಬಂದ.

ಬಹಳ ದಣಿದಿದ್ದುದರಿಂದ ಹಾಸಿಗೆಯಮೇಲೆ ಮೈಯೂರುತ್ತಲೇ ನಿದ್ದೆ ಬಂತು. ಕಣ್ಣುಬಿಟ್ಟಾಗ ಬೆಳಕು ಹರಿದಿತ್ತು. ಎದ್ದು ನೆಟ್ಟಗೆ ಲಿಂಗಯ್ಯನ ಮನೆಗೆ ಹೋದ. ದ್ಯಾವಪ್ಪನನ್ನು ನೋಡಿ ಲಿಂಗಯ್ಯ ದಿಗಿಲುಬಿದ್ದ. ಅತ್ಯಂತ ವಿನಯದಿಂದ ಅವನನ್ನು ಕೇಳಿದ, "ಬೆಳಗ್ಗೆ ಇಷ್ಟುದೂರ ಮನೆಗೆ ಬಂದಿರಲ್ಲ?"

ದ್ಯಾವಪ್ಪ ಹೇಳಿದ, "ಒಂದು ವಿಚಾರ ನಿನಗೆ ತಿಳಿಸಲು ಬಂದೆ. ಯಾರಿಗೂ ಹೇಳದಿದ್ದರೆ ತಿಳಿಸುವೆನು."

ಲಿಂಗಯ್ಯನಿಗೆ ವಿಚಾರವೇ ಅರ್ಥವಾಗಲಿಲ್ಲ, ಹೇಳಿದ "ಯಾರ ಹತ್ತಿರ ಹೇಳಲು ನಾನು ಹೋಗುತ್ತೇನೆ? ಇನ್ನು ನೀವು ಹೇಳಿದಮೇಲೆ ಬಾಯಿಬಿಡಲು ನನಗೆ ಧೈರ್ಯ ಎಲ್ಲಿ?"

"ಹಾಗೇನೂ ಅಲ್ಲ, ನಮ್ಮಿಂದ ಒಂದು ತಪ್ಪಾಗಿದೆ. ತಿಳಿಯದೆ ಹಾಗೆ ಮಾಡಿದೆವು. ಅದನ್ನು ನಿನಗೆ ಹೇಳಲು ಬಂದಿದ್ದೇನೆ."

"ಅಯ್ಯೋ ನಿಮ್ಮಿಂದ ತಪ್ಪಾಗುತ್ತದೆಯೇ? ಎಂಥ ಮಾತಾಡು ತಿದ್ದೀರಿ?"

"ನಿನ್ನೆ ಹಿತ್ತಿಲಿನಲ್ಲಿ ಸೌತೇಕಾಯಿ ಕಿತ್ತವರು ನಾವು. ಕೇಳಿದ್ದರೆ ನೀನೇ ಕೊಡುತ್ತಿದ್ದೆ. ನಾವು ಹೇಳದೆ ಕೇಳದೆ ನುಗ್ಗಿ ಸಿಕ್ಕಾಬಟ್ಟೆ ಕೊಯ್ದು ತಿಂದೆವು."

"ಕೊಯ್ದವರು ನೀವೇ! ನನ್ನ ಬಾಯಿ ಹಾಳಾಗಿಹೋಗ, ಯಾರೋ ಎಂದು ಬೈದೆ. ಮನಸ್ಸಿನಲ್ಲಿ ಏನೂ ತಿಳಿಯಬೇಡಿ. ನಂಜನ ಮನೆಯ ವರೆಂದು ಹಾಗೆ ಬೈದೆ."

"ನಮ್ಮಿಂದ ಎಷ್ಟು ನಷ್ಟವಾಗಿದೆ ಹೇಳು. ನಾನು ಅದನ್ನು ಕೊಡು ತ್ತೇನೆ."

ಲಿಂಗಯ್ಯ ಅವರಿಂದ ನಷ್ಟ ವಸೂಲುಮಾಡಲು ಒಪ್ಪಲಿಲ್ಲ.

---

## ೭. ನಾಟಕ ನಗರಕ್ಕೆ ದಾರಿತೋರಿಸಿತು.

ಹುಲಿಯ ಭಯದಿಂದ ಮಾಸ್ತರನ್ನು ತಪ್ಪಿಸಿ ಹುಡುಗರು ಅವರನ್ನು ಊರಿಗೆ ಕರೆದುಕೊಂಡು ಬಂದರು. ಹುಲಿಯಬಾಯಿಂದ ಹುಡುಗರನ್ನು ತಪ್ಪಿಸಿ ಮಾಸ್ತರು ಅವರನ್ನು ಕರೆದುಕೊಂಡು ಬಂದರೆಂದು ಊರಿನಲ್ಲಿ ವರ್ತಮಾನ ಹರಡಿತು! ಕಪ್ಪಾದಮೇಲೆ ಹುಡುಗರನ್ನು ಮನೆಯ ಹೊರಗೆ ಹೋಗಲು ಬಿಡುತ್ತಿರಲಿಲ್ಲ. ಹುಡುಗರ ಮುಖಂಡನಾದ ದ್ಯಾವಪ್ಪನಂತೂ ಕತ್ತಲಾಗುವ ಮುಂಚೆ ಮನೆಗೆ ಬಂದು ಅಣ್ಣನಿಗೆ ವರದಿ ಒಪ್ಪಿಸಬೇಕಿತ್ತು. ಈ ಮಧ್ಯೆ ಪರೀಕ್ಷಾ ಫಲಿತಾಂಶ ಹೊರಬಿತ್ತು. ದ್ಯಾವಪ್ಪ ಮೊದಲನೆಯ ತರಗತಿಯಲ್ಲಿ ಉತ್ತೀರ್ಣನಾಗಿದ್ದ. ಅವನ ಜೊತೆಗಾರರೂ ಉತ್ತೀರ್ಣ ರಾಗಿದ್ದರು. ಇವನ ಸಂಗಡಕ್ಕೆ ಸೇರಿದವರಲ್ಲಿ ಅನೇಕಮಂದಿ ಉತ್ತೀರ್ಣ ರಾಗಿರಲಿಲ್ಲ. ದ್ಯಾವಪ್ಪನಿಗೂ ಅವನ ಸ್ನೇಹಿತರಿಗೂ ತುಂಬಾ ಉತ್ಸಾಹ.

ಈ ಉತ್ಸಾಹಕ್ಕೆ ಸರಿಯಾಗಿ ಅಲ್ಲಿಗೆ ಒಂದು ನಾಟಕದ ಕಂಪನಿ ಬಂತು. ನಾಟಕ ನೋಡಿದಮೇಲೆ ಆಡಬೇಕೆಂಬ ಆಸೆ ಹುಡುಗರಲ್ಲಿ ಹುಟ್ಟಿತು. ನಾಟಕವಾಡಲು ಥಿಯೇಟರು ಬೇಕು; ಪರದೆ ಬೇಕು. ಇವನ್ನು ಜೋಡಿಸು ವುದು ಹೇಗೆ? ನಾಟಕದಲ್ಲಿ ಜಮಖಾನವನ್ನೇ ಹಾಸ ಬೇಕಾದ ನಿಯಮ ವಿಲ್ಲ. ಚಾಪೆಯಾದರೂ ಸರಿ, ಚಿಂದಿಬಟ್ಟೆಯಾದರೂ ಸರಿ. ಈ ನಾಟಕ ಮಂಡಲಿಯಲ್ಲಿ ಹರಿದುಹೋದ ಪರದೆಗಳನ್ನು ಹಾಸುವುದು ವಾಡಿಕೆ. ದ್ಯಾವಪ್ಪನ ಮಂಡಲಿಗೆ ಇದು ತಿಳಿಯಿತು. ಮನೆಯವರು ಬೆಂಚು ಕುರ್ಚಿಯ ದರ್ಜೆಗೆ ದುಡ್ಡು ಕೊಟ್ಟು ಕಳುಹಿಸಿದರೆ ಹುಡುಗರು ಜಮಖಾ ನದ ತರಗತಿಗೆ ಹೋಗುತ್ತಿದ್ದರು. ಇವರ ಈ ನಡವಳಿಕೆಯನ್ನು ನೋಡಿ ಮನೆಯವರಿಗೆ ತುಂಬಾ ಆನಂದವಾಯಿತು. ಹುಡುಗರಾದ ಮಾತ್ರಕ್ಕೆ ಏನು? ದುಡ್ಡು ಖರ್ಚುಮಾಡುವ ರೀತಿ ನಮಗಿಂತ ಅವರಿಗೆ ಹೆಚ್ಚು ಎನ್ನು ತ್ತಿದ್ದರು.

ನಾಟಕ ಮುಗಿದ ತರುವಾಯ ಜೊತೆಯಲ್ಲಿ ನಾಟಕಮಂಡಲಿಯವರು ಹಾಸಿದ ಪರದೆಯ ತುಂಡುಗಳನ್ನು ಸುತ್ತಿಕೊಂಡೋ ಹೊದ್ದುಕೊಂಡೋ ತರಲು ದ್ಯಾವಪ್ಪನ ಮಂಡಲಿಯವರು ಪ್ರಾರಂಭಿಸಿದರು. ನಾಟಕ ಶಾಲೆ

ಕಟ್ಟಲು ತೋಪಿನ ಮರಗಳನ್ನೆಲ್ಲ ಕಡಿದರು. ಮನೆ ಕಟ್ಟುವಷ್ಟು ಮರ ಕಡಿದು ಚಪ್ಪರದ ಹಾಗೆ ಥಿಯೇಟರನ್ನು ಕಟ್ಟಿದರು.

ನಾಟಕದಶಾಲೆಯ ನಿರ್ಮಾಣ, ನಾಟಕದ ಅಭಿನಯ, ಪರದೆಯ ಶೇಖರಣೆ ಒಟ್ಟಿಗೆ ಸಾಗಿದವು. ಈ ಮಧ್ಯೆ ಕೆಲವು ಮಂದಿ ಹುಡುಗರು ಬೆಂಗಳೂರು ಮೈಸೂರು ಪಟ್ಟಣಗಳಿಗೆ ಓದಲು ಹೋದರು. ದ್ಯಾವಪ್ಪ ನಿಗೂ ಹೋಗಿ ಓದಬೇಕೆಂಬ ಆಶೆ. ಆದರೆ ಅವನ ಮಲ ಅಣ್ಣ ತಮ್ಮಯ್ಯ ಗೌಡರು ಹಣ ಖರ್ಚುಮಾಡಿ ಓದಿಸಲು ಸಿದ್ಧರಾಗಿರಲಿಲ್ಲ. ವಿಧವೆಯಾದ ಆತನ ತಾಯಿಯಲ್ಲಿ ಓದಿಸುವ ಶಕ್ತಿ ಇಲ್ಲ. "ಏನಾದರೂ ಮಾಡಿ ಓದಿಸು" ಎಂದು ತಮ್ಮಯ್ಯಗೌಡರಿಗೆ ಹೇಳಬಹುದಿತ್ತು. ತಮ್ಮಯ್ಯಗೌಡರು ಮೊದಲೆ "ತಮ್ಮನಿಗಾಗಿ ಸಾಲಮಾಡಬೇಕಾಯಿತು. ನಾನೊಬ್ಬನೆ ಸೊಂಟಮುರಿದು ಕೊಂಡು ದುಡಿಯುವವನು" ಎಂದು ಹೇಳುತ್ತಿದ್ದರು. ಇಂಥ ಸನ್ನಿವೇಶದಲ್ಲಿ ತನ್ನ ಮಗನನ್ನು ಪಟ್ಟಣಕ್ಕೆ ಓದಲು ಕಳುಹಿಸು, ಎಂದು ಹೇಳಲು ದ್ಯಾವಪ್ಪನ ತಾಯಿಗೆ ಬಾಯಿ ಬರುತ್ತಿರಲಿಲ್ಲ.

ದ್ಯಾವಪ್ಪನ ಪೂರ್ಣಗಮನ ನಾಟಕದಮೇಲಿತ್ತು. ಆದ್ದರಿಂದ ಮುಂದಿನ ವಿದ್ಯಾಭ್ಯಾಸದ ವಿಚಾರ ಯೋಚಿಸಲಿಲ್ಲ. ನಾಟಕಶಾಲೆ ಸಿದ್ಧ ವಾಗಿ ಪರದೆಗಳನ್ನು ಕಟ್ಟಿಯಾಯಿತು. ನಾಟಕವಾಡಲು ಸಲಕರಣೆ ಸಿದ್ಧ ವಾಯಿತು.

ಒಂದುದಿನ ಮಧ್ಯಾಹ್ನ ನಾಟಕಶಾಲೆಯಲ್ಲಿ ಹುಡುಗರೆಲ್ಲ ಸೇರಿದ್ದರು. ಒಂದು ಗರುಡ ಕೋಳಿಮರಿಯೊಂದನ್ನು ಕಚ್ಚಿಕೊಂಡು ಒಂದು ಮರದ ಮೇಲೆ ಕುಳಿತುಕೊಂಡಿತು. ಕೋಳಿಮರಿ ಪೀ, ಪೀ, ಎಂದು ಕೂಗುತ್ತಿತ್ತು ಕೋಳಿಮರಿಯನ್ನು ಬಿಡಿಸುವುದಕ್ಕೋಸ್ಕರ ದ್ಯಾವಪ್ಪ ಕಲ್ಲನ್ನು ಎಸೆದ. ಕೋಳಿಮರಿಯೊಂದಿಗೆ ಗರುಡ ಅಲ್ಲಿಂದ ಹಾರಿತು

ಒಬ್ಬ ಹುಡುಗ ದ್ಯಾವಪ್ಪನನ್ನು ತಡೆದು ಹೇಳಿದ, "ಗರುಡನನ್ನು ಹೊಡೆಯಬೇಡ. ಅದುವಿಷ್ಣುವಿನ ವಾಹನ."

"ಹಾರುವಾಗ ಮಾತ್ರ ವಿಷ್ಣು ಅದರಮೇಲೆ ಕುಳಿತಿರುತ್ತಾನೆ. ಮರದ ಮೇಲೆ ಕುಳಿತಿರುವಾಗ ವಿಷ್ಣು ಅದರಮೇಲಿರುವುದಿಲ್ಲ" ಎಂದು ದ್ಯಾವಪ್ಪ ಹೇಳಿದ.

ಆ ಹುಡುಗ ಪ್ರತಿವಾದಿಸಿದ : "ಹಾರುವಾಗ ಮಾತ್ರವಲ್ಲ, ಯಾವಾಗಲೂ ಕುಳಿತಿರುತ್ತಾನೆ."

"ಕೋಳಿಮರಿಯನ್ನು ಹಿಡಿದುಕೊಂಡಿರುವಾಗಲೂ ವಿಷ್ಣು ಕುಳಿತಿರುವನೇ ?''

"ಹೌದು ಯಾವಾಗಲೂ ಕುಳಿತಿರುತ್ತಾನೆ, ಅದು ಅವನ ವಾಹನ. ನಾವು ಎತ್ತುಗಳಿಗೆ ಹುಲ್ಲು ಹುರುಳಿ ಹಾಕುವುದಿಲ್ಲವೇ ಹಾಗೆ. ಅದು ತನ್ನ ಆಹಾರವನ್ನು ತಿನ್ನುತ್ತದೆ."

"ಎತ್ತು ಹುಲ್ಲು ಹುರುಳಿ ತಿನ್ನುವಾಗ ನಾವು ಗಾಡಿಯಲ್ಲಿ ಕುಳಿತಿರುವುದಿಲ್ಲ. ಹಾಗೆ ವಿಷ್ಣುವೂ."

"ನಾವು ನರಮನುಷ್ಯರು. ವಿಷ್ಣುವಿನೊಂದಿಗೆ ಹೋಲಿಸಿಕೊಳ್ಳುವುದಕ್ಕಾಗುವುದಿಲ್ಲ."

"ನರಮನುಷ್ಯರೇನು ? ದೇವರೇನು ? ನಿಯಮವೆಲ್ಲ ಒಂದೇ.''

"ಅದು ಸುಳ್ಳು. ನರಮನುಷ್ಯ ಬೇರೆ, ದೇವರು ಬೇರೆ. ದೇವರು ನಮ್ಮನ್ನು ಸೃಷ್ಟಿಸುವವನು. ನಾವು ಅವನು ಒಂದೇ ಎಂದು ಹೇಳುವುದು ಸರಿಯಲ್ಲ."

ತರ್ಕ ಬೆಳೆಯುತ್ತಾ ಬಂತು. ಒಬ್ಬರೂ ನಿರ್ಣಯಕ್ಕೆ ಬರಲಿಲ್ಲ. ನೆರೆದ ಹುಡುಗರು ತಮಗೆ ಬೇಕಾದ ಪಕ್ಷ ಸೇರಿದರು. ದೊಡ್ಡ ಗದ್ದಲವಾಯಿತು. ನೂಕಾಟ, ಹೊಡೆದಾಟದವರೆಗೂ ಹೋಯಿತು. ನೂಕಾಟದಲ್ಲಿ ನಾಟಕಶಾಲೆ ಮುರಿದುಬಿತ್ತು. ಕಾದಾಟವಾಡುವವರಿಗೆ ಏನೂ ಆಗಲಿಲ್ಲ. ನೋಡುತ್ತಿದ್ದವನ ಮೇಲೆ ಚಪ್ಪರ ಬಿದ್ದು ಅವನಿಗೆ ತುಂಬಾ ಗಾಯವಾಯಿತು. ಅದನ್ನು ನೋಡಿ ದ್ಯಾವಪ್ಪನ ವಿನಾ ಎಲ್ಲರೂ ಓಡಿದರು. ದ್ಯಾವಪ್ಪನು ಆ ಹುಡುಗನನ್ನು ಚಪ್ಪರದ ಅಡಿಯಿಂದ ಹೊರಗೆ ತಂದು ಬಿಟ್ಟನು. ತಲೆಯಿಂದ ರಕ್ತ ಸೋರುತಿತ್ತು. ಅವನು ಅಳುತ್ತಾ ಮನೆಯ ಕಡೆ ಹೊರಟ.

ನಾಟಕಮಂಡಲಿಗೆ ಮುಖಂಡ ದ್ಯಾವಪ್ಪ. ಆದ್ದರಿಂದ ಈ ಅಪರಾಧ ಅವನಮೇಲೆ ಬರುವುದು ಖಂಡಿತ. ಮನೆಗೆ ಹೋದರೆ ಉಳಿಗಾಲವಿಲ್ಲ. ತಮ್ಮಯ್ಯಗೌಡರು ಓದುವುದಕ್ಕೆ ಕಳುಹಿಸಲು ಮೊದಲೇ ನೆಪ ಹೂಡಿದ್ದರು.

ಈ ಘಟನೆ ಅವರಿಗೆ ತುಂಬಾ ಅನುಕೂಲವಾಗಿತ್ತು. ಊರಿನಲ್ಲಿಯೇ ಹೀಗೆ ಅವಾಂತರ ಮಾಡುವವನನ್ನು ಪರಊರಿಗೆ ಹೇಗೆ ಕಳುಹಿಸುವುದು ಎಂದು ಹೇಳಲು ದಾರಿಯಾಗಿತ್ತು. ನಾನು ಈಗ ಏನು ಮಾಡಲಿ ಎಂದು ನಿಂತು ಕೊಂಡು ದ್ಯಾವಪ್ಪ ಯೋಚಿಸಿದ. ಯಾವುದನ್ನೂ ನಿಶ್ಚೈಸಲು ಸಾಧ್ಯ ವಾಗಲಿಲ್ಲ. ಈ ಯೋಚನೆಯಲ್ಲಿಯೇ ಅಲ್ಲಿಂದ ಹೊರಟ. ಹೀಗೆ ಅವನು ಹೋಗುತ್ತಿರುವಾಗ ಅವನ ಹೆಸರನ್ನು ಹಿಡಿದು ಕೂಗಿದಹಾಗಾಯಿತು. ಸುತ್ತಲೂ ನೋಡಿದ, ಪಾದರಿಗಳು. ಅವರ ಹತ್ತಿರಹೋಗಿ ನಮಸ್ಕಾರ ಮಾಡಿದ. ಅವನ ಬೆನ್ನು ತಟ್ಟುತ್ತಾ ಪಾದ್ರಿಗಳು ಹೇಳಿದರು," ಏನಪ್ಪಾ, ನೀನು ಪರಿಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಉತ್ತೀರ್ಣನಾದೆಯಂತೆ. ಪಾಸಾದಮೇಲೆ ನಿನ್ನ ಮುಖವನ್ನೇ ನೋಡಲಿಲ್ಲ. ಬಹಳ ಸಂತೋಷ. ಹಾಗೆ ಕಷ್ಟಪಟ್ಟು ಓದಬೇಕು, ನಿಮ್ಮ ಜನಾಂಗದವರು ಮುಂದಕ್ಕೆ ಬರ ಬೇಕು."

ದ್ಯಾವಪ್ಪ ಅವರ ಮಾತಿಗೆ ಉತ್ತರಕೊಡದೆ ಮುಖನೋಡುತ್ತಾ ನಿಂತುಕೊಂಡ. ಬಾಯಿಯಿಂದ ಮಾತುಹೊರಡಲಿಲ್ಲ. ಪಾಸಾದವರೆ ಬಹಳ ಸಂತೋಷದಲ್ಲಿರುತ್ತಾರೆ. ಇವನು ಮೊದಲನೆಯ ದರ್ಜೆಯಲ್ಲಿ ಪಾಸಾಗಿದ್ದರೂ ಉದಾಸೀನನಾಗಿರುವನಲ್ಲಾ ಎ ಸುಕೊಂಡು ಪಾದರಿಯ ವರು ಹೇಳಿದರು, " ಪ್ರಥಮದರ್ಜೆಯಲ್ಲಿ ಪಾ ಾಗಿರುವೆ, ಎಷ್ಟು ಹರ್ಷ ದಿಂದಿರಬೇಕು. ಇದೇಕೆ ಹೀಗಿರುವೆ ?"

ದುಃಖವನ್ನು ನುಂಗಿಕೊಂಡು ದ್ಯಾವಪ್ಪ ಹೇಳಿದ, "ನಮ್ಮಣ್ಣ ಓದಲು ಕಳುಹಿಸುವುದಿಲ್ಲವಂತೆ. ನಾನು ಅವರ ಮಾತನ್ನು ಮೀರಿ ಓದಲು ಹೊರಟರೆ ನಮ್ಮ ಮನೆ ಹಿಸ್ಸೆಯಾಗುವುದು. ನಮ್ಮ ಅಣ್ಣ ನನ್ನ ಪಾಲನ್ನು ಅದರ ಜೊತೆಗೆ ಸಾಲವನ್ನು ಸೇರಿಸಿ ಮನೆಯಿಂದ ಹೊರಡಿಸುವನು. ವಿದ್ಯಾ ಭ್ಯಾಸಕ್ಕೋಸ್ಕರ ಅಣ್ಣತಮ್ಮರಿಗೆ ಹಿಸ್ಸೆಯಾಯಿತು, ಎಂದು ಜನ ಹೇಳಿ ಕೊಳ್ಳುವರು. ಹಿಸ್ಸೆಯಾದ ಮೇಲೆ ನಾನು ಓದುವಹಾಗಿಲ್ಲ. ನಮ್ಮ ತಾಯಿ ಬದುಕಿರುವವರೆಗೂ ಹೆಸ್ಸೆಯಾಗಲು ಒಪ್ಪುವುದಿಲ್ಲ. ಆದ್ದರಿಂದ ಓದಲು ಹೋಗುವುದಿಲ್ಲ."

" ನಿಮ್ಮಲ್ಲಿ ಇಷ್ಟು ಹಣವಿದೆ, ನೀನು ಇಷ್ಟು ಬುದ್ಧಿವಂತ; ನಿಮ್ಮ

ಅಣ್ಣ ನಿನ್ನನ್ನು ಓದಲು ಕಳುಹಿಸುವುದಿಲ್ಲ. ನಿಮ್ಮ ಜನಾಂಗದಲ್ಲಿ ಓದು ವವರಿಗೆ ತಕ್ಕ ವ್ಯವಸ್ಥೆಯಿಲ್ಲದುದರಿಂದ ನೀವು ಹೀಗೆ ಹಿಂದೆ ಬಿದ್ದಿರುವುದು. ನೀನು ಹೆದರಬೇಡ ದ್ಯಾವಪ್ಪ. ನಮ್ಮ ಮಿಶನ್ ಮೂಲಕ ನಿನ್ನನ್ನು ನಾವು ಓದಿಸುತ್ತೇವೆ. ನಿನಗೆ ಸ್ಕಾಲರ್‌ಷಿಪ್ ಸಿಗುವಂತೆ ನಾವು ಪ್ರಯತ್ನಪಡು ತ್ತೇವೆ. ನಿಮ್ಮ ಅಣ್ಣನ ಮಾತನ್ನು ಕೇಳಲೂಬೇಡ, ಹಿಸ್ಸೆ ತೆಗೆದು ಕೊಳ್ಳಲೂ ಬೇಡ. ನೀನು ಇನ್ನೂ ಚಿಕ್ಕವನು ಹಿಸ್ಸೆ ಕೊಡುವಾಗ ಮೋಸಮಾಡಬಹುದು. ನೀನು ಹೋಗಿ ಅಧಿಕಾರಿಯಾಗಿ ಬಾ. ಆಗ ನಿಮ್ಮ ಅಣ್ಣ ನಿನ್ನ ಕರೆದು ಸರಿಯಾಗಿ ಹಿಸ್ಸೆಮಾಡಿ ಕೊಡುತ್ತಾರೆ. ನೀನು ಜಮಿೀನು, ಮನೆ, ತಾಯಿ ಇವರ ಯೋಚನೆ ಮಾಡಬೇಡ.''

ಇವರ ಮಾತು ದ್ಯಾವಪ್ಪನಲ್ಲಿ ಉತ್ಸಾಹ ತುಂಬಿತು. ಮನೆಗೆ ಹೋಗಲು ಮೊದಲೆ ಬೇಜಾರು. ಅಲ್ಲಿ ಇನ್ನು ಯಾವ ವಿಪತ್ತು ಕಾದಿದೆಯೋ ಎಂಬ ಭಯ. ಪಾದರಿಯವರ ಜೊತೆ ಅವರ ಮನೆಗೆ ಹೋದ. ಅವರ ಮನೆಯಲ್ಲಿ ಸ್ವಲ್ಪ ಸಮಯ ಕಳೆದ ತರುವಾಯ ಹೇಳಿದ, "ನೀವು ಸಹಾಯ ಮಾಡುವುದಾದರೆ ನಾನು ಖಂಡಿತ ಓದಲು ಹೋಗುವೆನು. ನನಗೆ ಹಣ ಕಾಸಿನ ವ್ಯವಸ್ಥೆ ಸರಿಯಾಗಿ ಆಗುವವರೆಗೂ ನೀವು ಧನ ಸಹಾಯ ಮಾಡುತಿರಬೇಕು."

ಅವನ ಮಾತನ್ನು ಕೇಳಿ ಪಾದರಿಗಳು ನಕ್ಕು ಹೇಳಿದರು, "ಹಣದ ಯೋಚನೆ ಬಿಟ್ಟುಬಿಡು. ಬೇಕಾದಷ್ಟು ನಾನು ಕೊಡುತ್ತೇನೆ. ನಾಳೆ ನಿಮ್ಮ ಅಣ್ಣನವರಿಂದ ವಸೂಲ್ಮಾಡುತ್ತೇವೆ. ನೀನು ಹೊರಡಲು ಸಿದ್ಧನಾಗು."

ಪಾದರಿಯವರ ಮಾತುಕಥೆಯಿಂದ ದ್ಯಾವಪ್ಪನ ಹೃದಯ ಹಗುರ ವಾಯಿತು, ಹೇಳಿದ, "ನೀವು ಹೇಳಿದರೆ ನಾನು ನಾಳೆಯೇ ಹೊರಡುವೆನು'

ದ್ಯಾವಪ್ಪನ ದೃಢ ಸಂಕಲ್ಪ ನೋಡಿ ಪಾದರಿಯವರಿಗೆ ತುಂಬಾ ಆನಂದವಾಯಿತು. ಅವನ ಬೆನ್ನು ತಟ್ಟಿ ಹೇಳಿದರು, "ಹಾಗಿರಬೇಕು ದ್ಯಾವಪ್ಪ. ನೀವೆಲ್ಲ ಮನೆ, ಮನೆ ಎಂದುಕೊಂಡು ಹೀನಸ್ಥಿತಿಗೆ ಇಳಿಯು ತಿದ್ದೀರಿ. ತಂದೆ ತಾಯಿ ಕಟ್ಟಿಸಿದ ಮನೆಯನ್ನೇ ನಂಬಿ, ಅದನ್ನೇ ಮನೆ ಮನೆ ಎಂದು ಅಣ್ಣ ತಮ್ಮ ಜಗಳವಾಡಲು ಪ್ರಾರಂಭಿಸುತ್ತೀರಿ. ಹೊರಗೆ ಹೋಗಿ ನಿಮಗೆ ಬೇಕಾದಹಾಗೆ ಮನೆಕಟ್ಟಲು ನಿವು ಪ್ರಯತ್ನ ಪಡುವುದಿಲ್ಲ"

ಅವರ ಮಾತನ್ನು ಕೇಳುತ್ತಾ ದ್ಯಾವಪ್ಪ ನಿಂತಿದ್ದ. ಪಾದರಿಗಳು ಹೇಳಿದರು, "ನೀವು ಮುಂದೆ ಬರಲು ಆಶೆಪಡುವುದಿಲ್ಲ. ಯಾರಾದರೂ ಮುಂದೆ ಬರಲು ಪ್ರಯತ್ನಪಟ್ಟರೆ ಅವರಿಗೆ ಅವಕಾಶ ಸಿಗುವುದಿಲ್ಲ. ನನ್ನ ಮಕ್ಕಳಿಗೆ ಹಣಸಂಪಾದಿಸಿ ಇಡಬೇಕೆಂಬ ಆಶೆಯೇನನಗಿಲ್ಲ. ನಾನು ಹಣ ಸಂಪಾದಿಸಿ ಇಡುವುದೂ ಇಲ್ಲ. ಬೇಕಾದಷ್ಟು ಕಷ್ಟಬರಲಿ. ನನ್ನ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುತ್ತೇನೆ. ತರುವಾಯ ಅವರ ಜೀವನ ಅವರು ನೋಡಿಕೊಳ್ಳುತ್ತಾರೆ. ನೀವು ಹಾಗಲ್ಲ. ತಂದೆ ಸಂಪಾದಿಸಿದ ಸಂಪತ್ತಿಗೆ ಗುದ್ದಾಡುತಿರುತ್ತೀರಿ."

ಮರುದಿನ ಪಾದರಿಗಳಿಂದ ಖರ್ಚಿಗೋಸ್ಕರ ಹಣವನ್ನೂ ಪರಿಚಯದ ಕಾಗದವನ್ನೂ ತೆಗೆದುಕೊಂಡು ದ್ಯಾವಪ್ಪ ಬೆಂಗಳೂರು ನಗರಕ್ಕೆ ಹೊರಟ.

## ೮. ಹಾವಿನ ಬಾಯಿಯಲ್ಲಿ

ಒಬ್ಬರಿಗೂ ದ್ಯಾವಪ್ಪನ ಪತ್ತೆ ಸಿಗಲಿಲ್ಲ. ಹಿಂತಿರುಗಿ ಬರುವನೆಂಬ ಆಶೆಯೂ ವ್ಯರ್ಥವಾಯಿತು. ಆತ್ಮಹತ್ಯಮಾಡಿಕೊಂಡನೋ ಎಂದು ಕೆರೆ, ಬಾವಿಗಳನ್ನೆಲ್ಲಾ ನೋಡಿದರು. ಊರಿಗೆ ಊರೇ ಅವನನ್ನು ಹುಡುಕಿತು. ಅವನ ತಾಯಿ ಅನ್ನ ನೀರು ಬಿಟ್ಟು ಅಳತೊಡಗಿದರು. ದ್ಯಾವಪ್ಪನ ಗಂಡಾಂತರಗಳಲ್ಲಿ ಎಲ್ಲರಿಗೂ ಭಯವಿತ್ತು. ಊರನ್ನೇ ವಿಪತ್ತಿಗೆ ಹಾಕುವನೆಂದು ಯಾರೂ ನೆನಸಿರಲಿಲ್ಲ. ಎಲ್ಲರ ಬಾಯಲ್ಲಿಯೂ ದ್ಯಾವಪ್ಪ ಎಲ್ಲಿ? ಸಿಕ್ಕಿದನೇ? ಇದೇ ಮಾತು. ದ್ಯಾವಪ್ಪನ ಮೇಲಿನ ಪ್ರೇಮಕ್ಕಿಂತಲೂ ಅವನ ತಾಯಿಯ ರೋದನವೇ ಎಲ್ಲರ ಮನಸ್ಸನ್ನೂ ಹೆಚ್ಚಿಗೆ ಹಿಂಡಿತು.

ಉರಿಯುವವನು ಎಂದಿದ್ದರೂ ಹೀಗೆಯೇ ಎಂದು ತಮ್ಮಯ್ಯಗೌಡರ ಮನಸ್ಸು. ಆದರೆ ದ್ಯಾವಪ್ಪನ ತಾಯಿಯ ರೋಧನದಿಂದ ಮನೆಯಲ್ಲಿ ಇರಲು ಸಾಧ್ಯವಾಗುತ್ತಿರಲಿಲ್ಲ.

ಹೀಗೆ ಜನರು ವ್ಯಥೆಪಡುತ್ತಿರುವಾಗ ಮತ್ತೊಂದು ವರ್ತಮಾನ ಹರಡಿತು. ಅವನು ಕಣ್ಮರೆಯಾದ್ದಕ್ಕಿಂತಲೂ ಇದು ಇನ್ನೂ ಭಯಂಕರವಾಗಿತ್ತು:

'ದ್ಯಾವಪ್ಪ ಕ್ರೈಸ್ತನಾಗಿ ಅವರ ಹಾಸ್ಟಲಿನಲ್ಲಿ ವಾಸಮಾಡಿಕೊಂಡು ಬೆಂಗಳೂರಿನಲ್ಲಿ ಓದುತಿದ್ದಾನೆ.'

ಈ ದುಃಖವಾರ್ತೆಯನ್ನು ಕೇಳಿ ಆತನ ತಾಯಿ ನಾಲ್ಕೈದುಸಾರಿ ಭಾವಿಗೆ ಹಾರಲು ಹೋದರು. ಜನರು ಬಲವಂತದಿಂದ ಹಿಡಿದು ತಂದರು. ಕಷ್ಟಪಟ್ಟು ಓದುತ್ತಿರುವ ಸಮಾಚಾರದಿಂದ ಅವನ ಮೇಲಿನ ಕೋಪವು ಜನರಲ್ಲಿ ಕಡಮೆಯಾಯಿತು. ಅವನಮೇಲೆ ಸಹಾನುಭೂತಿ ಹುಟ್ಟಿತು. ತಮ್ಮಯ್ಯಗೌಡರನ್ನು ಜನರು ನಿಂದಿಸಲು ಪ್ರಾರಂಭಿಸಿದರು: ತಂದೆ ಒಬ್ಬರೆ; ಮಲತಾಯಿ ಮಗನೆಂದು ಹೇಗೆ ನೋಡುತಿದಾರೆ. ಮಕ್ಕಳಿಗೋಸ್ಕರ ತಂದೆ ಇಷ್ಟು ಆಸ್ತಿ ಸಂಪಾದಿಸಿದ್ದರೂ ವಿದ್ಯಾಭ್ಯಾಸಕ್ಕೆ ಮಗ ಧರ್ಮ ಬಿಡಬೇಕಾಯಿತು.

ತಮ್ಮಯ್ಯಗೌಡರಿಗೆ ಇದು ಬಹಳ ತೊಂದರೆಗೆ ಇಟ್ಟುಕೊಂಡಿತು. ಅವರ ಭಾಗದ ಹಿಸ್ಸೆಯನ್ನು ಅವರಿಗೆ ಕೊಟ್ಟು ತಾನೂ ತನ್ನ ಮಕ್ಕಳೂ ಬೇರೆ ಸುಖವಾಗಿರುವುದಕ್ಕೆ ಮೇಲು ಎಂದು ಯೋಚಿಸಿದರು. ಯಾವುದಕ್ಕೂ ದ್ಯಾವಪ್ಪ ಊರಿಗೆ ಬರುವುದು ಅನಿವಾರ್ಯವಾಗಿತ್ತು. ಆದರೆ ಊರಿಗೆ ಕರೆಯಿಸುವ ಮಾರ್ಗ ಯಾವುದು? ಇವರ ಮಾತಿಗೆ ಖಂಡಿತ ಬರುವುದಿಲ್ಲ. ಅವನ ತಾಯಿಯ ದುಃಖವನ್ನು ಮುಂದೊಡ್ಡಿ ಪಾದರಿಯವರ ಹತ್ತಿರ ಹೋದರು. ಇವರಿಗೆ ಸಮಾಧಾನ ಹೇಳಿ ದ್ಯಾವಪ್ಪನಿಗೆ ಊರಿಗೆ ಬರುವಂತೆ ಕಾಗದ ಬರೆಯುವುದಾಗಿ ಪಾದರಿಯವರು ಹೇಳದರು.

ಪಾದರಿಯವರ ಪತ್ರ ದ್ಯಾವಪ್ಪನಿಗೆ ತಲಪಿತು. ತಾನು ಬರುವುದಾಗಿ ಅವರಿಗೆ ಪತ್ರ ಬರೆದ. ಅದರಲ್ಲಿ ಬರುವ ದಿನ ಮತ್ತು ತಾರೀಖನ್ನು ಸಹ ಬರೆದಿದ್ದ. ಅದೇ ರೀತಿ ದ್ಯಾವಪ್ಪ ಬೆಂಗಳೂರಿನಿಂದ ಊರಿಗೆ ಹೊರಟ. ಊರನ್ನು ತಲಪಲು ರೈಲು, ಮೋಟಾರುಮಾರ್ಗವಲ್ಲದೆ ಹತ್ತು ಮೈಲಿ ಕಾಲುನಡಿಗೆಯಲ್ಲಿ ಹೋಗಬೇಕಿತ್ತು. ಮಧ್ಯೆ ತುಂಗಾನದಿಯನ್ನೂ ದಾಟಬೇಕಿತ್ತು. ಆಗಲೇ ಮುಂಗಾರು ಮಳೆ ಹಿಡಿದಿತ್ತು. ಪೂರ್ಣಪ್ರವಾಹದಿಂದ ಹೊಳೆ ಹರಿಯುತಿತ್ತು. ಸರಕಾರಿ ರಸ್ತೆಯನ್ನು ಬಿಟ್ಟು ಒಂದು ಮೈಲಿ ಬರುವುದರೊಳಗಾಗಿ ಪ್ರವಾಹದಿಂದ ಭೋರ್ಗರೆಯುತ್ತಿರುವ ನದಿ. ಆಗಲೇ ಸಾಯಂಕಾಲವಾಗಿತ್ತು. ಮಳೆಗಾಲದ ಹಾದಿ. ಇನ್ನೂ ಆರೇಳು ಮೈಲಿಯ ನಡಿಗೆ. ಆದ್ದರಿಂದ ದ್ಯಾವಪ್ಪ ತವಕದಿಂದ ನದಿಯ ಹತ್ತಿರ ಬಂದ. ಅಂಬಿಗರು ದೋಣಿಯನ್ನು ಮರದ ಬುಡಕ್ಕೆ ಕಟ್ಟಿ ಹುಲ್ಲಿನ ಗುಡಿಸಿಲಿನಲ್ಲಿ ಬೆಂಕಿ

ಕಾಯಿಸುತಿದ್ದರು. ದ್ಯಾವಪ್ಪ ಅವರ ಹತ್ತಿರ ಹೋಗಿ ಹೇಳಿದ, "ನಾನು ನದಿ ದಾಟಬೇಕು, ಕತ್ತಲಾಗುತ್ತಾ ಬಂತು. ಬೇಗ ಹೊಳೆ ದಾಟಿಸಿ."

ಅಂಬಿಗರೊಬ್ಬರೂ ಆವನ ಮಾತಿಗೆ ಉತ್ತರ ಕೊಡಲಿಲ್ಲ. ತಿರುಗಿ ಕೇಳಿದ, ಆವರು ಒಬ್ಬರ ಮುಖವನ್ನು ಒಬ್ಬರು ನೋಡಿದರು. ಕೊನೆಗೆ ಒಬ್ಬ ಬಾಯಿತೆರೆದ, "ಹೊಳೆಯಲ್ಲಿ ನೆರೆ ಬಂದಿದೆ. ಮೇಲ್ಮಳೆ ಜೋರಾಗಿರಬೇಕು. ಈ ತುಂಬಿದ ಹೊಳೆಯಲ್ಲಿ ದೋಣಿ ಹೇಗೆ ಬಿಡುವುದು ?"

"ಏನಾದರೂ ಮಾಡಿ, ನಾನು ಹೋಗಲೇಬೇಕು. ಬೆಂಗಳೂರಿನಿಂದ ಬಂದಿದ್ದೇನೆ."

"ಪ್ರಾಣದಮೇಲೆ ಆಶೆ ಇಲ್ಲದವರು ಈಗ ಹೊಳೆ ದಾಟಬೇಕು. ಬರಿ ಮಳೆ ಸಹ ಅಲ್ಲ; ಚಳಿಯಲ್ಲಿ ನಡುಗುತಿದ್ದೇವೆ. ಹುಟ್ಟು ಹಾಕುವುದಕ್ಕೂ ಕೈ ಬರುವುದಿಲ್ಲ.

ತನಗೆ ಗೊತ್ತಿದ್ದ ಬುದ್ಧಿವಂತಿಕೆಯನ್ನೆಲ್ಲ ದ್ಯಾವಪ್ಪ ಉಪಯೋಗಿಸಿದ. ಯಾವ ಪ್ರಯೋಜನಕ್ಕೂ ಬರಲಿಲ್ಲ. ಆಗಲೇ ಹೊತ್ತಾಗಿತ್ತು. ಉದ್ವೇಗದಲ್ಲಿ ಹೇಳಿದ, "ಪ್ರತಿಯೊಂದು ಕೆಲಸದಲ್ಲಿಯೂ ತೊಂದರೆ, ಪ್ರಾಣಭಯ ಇದ್ದೇಯಿರುತ್ತದೆ. ಅದಕ್ಕೆ ಹೆದರಿ ಯಾರೂ ಸುಮ್ಮನಿರುವುದಿಲ್ಲ. ಜಾಗ್ರತೆಯಾಗಿ ನಾನು ಹೊಳೆ ದಾಟಬೇಕು. ಕಪ್ಪು ಕವಿಯುತಿದೆ. ಏನಾದರೂ ಮಾಡಿ ಹೊಳೆ ದಾಟಿಸಿ."

ದೋಣಿಯವರು ತಮ್ಮಲ್ಲಿಯೇ ಮಾತಾಡಿಕೊಂಡರು. ಎಲ್ಲರೂ ದ್ಯಾವಪ್ಪನಿಗೆ ಸಹಾನುಭೂತಿಯನ್ನು ತೋರಿಸಿ ನದಿಯನ್ನು ಬೈದರು. ನೆರೆ ಇಲ್ಲದೆಹೋಗಿದ್ದರೆ ಮಧ್ಯರಾತ್ರಿಯಾಗಿದ್ದರೂ ಮಾತನ್ನು ಮಿರಾರುತ್ತಿರಲಿಲ್ಲವೆಂದು ಹೇಳಿದರು.

ದ್ಯಾವಪ್ಪನಿಗೆ ಮಾತಾಗಲಿ, ಸಹಾನುಭೂತಿಯಾಗಲಿ ಬೇಕಿರಲಿಲ್ಲ. ಹೊಳೆ ದಾಟಬೇಕಿತ್ತು.

ದೋಣಿಯವರಲ್ಲಿ ದೊಡ್ಡವನು ಬೆಂಕಿಯಲ್ಲಿ ಕೈಯನ್ನು ಕಾಯಿಸುತ್ತಾ ಹೇಳಿದ, "ಅಯ್ಯ, ನೀವು ಇಷ್ಟು ಹೇಳುತಿದ್ದೀರಿ. ನಿಮಗೂ ಅವಸರದ ಯಾವುದೋ ಕೆಲಸ ಇರಬೇಕು. ಖಂಡಿತ ಆಗುವುದಿಲ್ಲ ಎಂದು ಹೇಳುವುದೂ ನಮ್ಮ ಧರ್ಮವಲ್ಲ. ನಿಮ್ಮಂಥವರ ಉಪ್ಪು ತಿಂದು ನಾವು

ಜೀವಿಸುವವರು. ಸಮಯ ಎಂದರೆ ಎಲ್ಲರಿಗೂ ಒಂದೇ. ನಾವು ಎಲ್ಲ ಸೇರಿ ನಿಮ್ಮನ್ನು ಹೊಳೆ ದಾಟಿಸುತ್ತೇವೆ. ಒಬ್ಬರು ಇಬ್ಬರು ಹುಟ್ಟು ತೆಗೆದರೆ ಆಗುವುದಿಲ್ಲ. ಕಪ್ಪು ಕವಿಯುತಿದೆ. ಹತ್ತು ರೂಪಾಯಿ ಕೊಡಿ. ನಿಮ್ಮ ಹೆಸರನ್ನು ಹೇಳ್ತೀವಿ ಎರಡೆರಡು ದರಾಮು ಸಾರಾಯಿ ಕುಡಿದು ಹೊಳೆ ದಾಟಿ ಸುತ್ತೇವೆ. ಇಲ್ಲದೆಹೋದರೆ ಚಳಿಯಲ್ಲಿ ಪ್ರಾಣ ಹೋಗುತ್ತದೆ."

ಬೆಂಗಳೂರಿನಿಂದ ನೂರೆಪ್ಪತ್ತು ಮೈಲಿ ಮೂರುವರೆ ರೂಪಾಯಿ ಕೊಟ್ಟು ಬಂದ. ಅರ್ಧ ಫರ್ಲಾಂಗ್ ಹೊಳೆ ದಾಟುವುದಕ್ಕೆ ಹತ್ತು ರೂಪಾಯಿ ಕೇಳುತ್ತಾರೆ. ಅವರ ಮಾತು ಕೇಳಿ ದ್ಯಾವಪ್ಪನಿಗೆ ನಗು ಬಂತು. ಆದರೆ ಅಲ್ಲಿ ನಗು, ಅಳು ಒಂದೇ. ಅವನ ಜೋಬಿನಲ್ಲಿ ಎಂಟೇ ಆಣೆ ಇತ್ತು. ಅವರು ಕೇಳಿದ್ದು ಹತ್ತುರೂಪಾಯಿ. ಅವರು ಎಂಟು ಆಣೆ ಕೇಳಿದ್ದರೆ ತನ್ನ ಜೋಬಿನಲ್ಲಿ ಇದ್ದ ದುಡ್ಡನ್ನೆಲ್ಲ ಕೊಟ್ಟು ಹೊಳೆ ದಾಟುತಿದ್ದ. ಅವನ ಹತ್ತಿರ ಇದ್ದಿದ್ದರೆ ಹತ್ತು ರೂಪಾಯಿಯಲ್ಲ ಇಪ್ಪತ್ತು ರೂಪಾಯಿ ಕೊಡುತ್ತಿದ್ದ. ಏನು ಮಾಡುವುದು ? ಅವನ ಜೋಬಿನಲ್ಲಿ ಇದ್ದದ್ದು ಎಂಟೇ ಆಣೆ."

ಅವರೊಂದಿಗೆ ಚೌಕಾಸಿ ಮಾಡುವುದು ಚೆನ್ನಾಗಿಲ್ಲವೆಂದು ಯೋಚಿಸಿ ಹೇಳಿದ, "ರಾತ್ರಿ ಯಾವುದಾದರೂ ಹಳ್ಳಿಯಲ್ಲಿ ಉಳಿದು ಬೆಳಗ್ಗೆ ಬರು ತ್ತೇನೆ. ಹೊಳೆಯೂ ಇಳಿದಿರುತ್ತದೆ."

ಕಪ್ಪು ಕವಿಯುತಿತ್ತು. ಅಂಬಿಗರು ದೋಣಿಯನ್ನು ಗಟ್ಟಿಯಾಗಿ ಮರಕ್ಕೆ ಕಟ್ಟಿ ತಮ್ಮ ಮನೆಗೆ ಹೋದರು. ಜನಸಂಚಾರ ಇಲ್ಲದ ಸ್ಥಳ. ಅಂಬಿಗರು ಹೋದಮೇಲೆ ನರಮನುಷ್ಯರ ಸುಳಿವಿರಲಿಲ್ಲ. ಹುಳು ಹಪ್ಪಟ್ಟೆ ಕೂಗುತಿದ್ದವು. ಬರಬರುತ್ತಾ ಕಪ್ಪು ಹೆಪ್ಪುಗಟ್ಟಿತು. ಅಲ್ಲಿಯೇ ಮರದ ಬುಡ ದಲ್ಲಿ ಅಡಗಿದ್ದ ದ್ಯಾವಪ್ಪ ಹೊರಗ ಬಂದ. ಹೊರಗೆ ನಿಂತುಕೊಂಡು ಕಿವಿ ಗೊಟ್ಟು ಕೇಳಿದ. ನರಮನುಷ್ಯರ ಶಬ್ದ ಕೇಳಿಸಲಿಲ್ಲ. ಅಂದಾಜಿನಿಂದ 'ದೋಣಿ ಕಂಡಿ'ಗೆ ಹೋದ. ಮರದಬುಡಕ್ಕೆ ದೋಣಿಯನ್ನು ಕಟ್ಟಿದ್ದರು. ಗುಡಿಸಲಿಗೆ ಹೋಗಿ ಹುಟ್ಟನ್ನು ತಂದ. ದೋಣಿಯೊಳಗೆ ಕುಳಿತುಕೊಂಡು ಹಗ್ಗಬಿಚ್ಚಿದ.

ಹುಟ್ಟನಿಂದ ತಿವಿದು ದೋಣಿಯನ್ನು ನೀರಿನಕಡೆ ತಳ್ಳುವಾಗ ಅಂದು ಕೊಂಡ: ಹತ್ತು ರೂಪಾಯಿ ಕೊಡಿ ಎಂದು ಕೇಳಿದರು. ಎಂಟಾಣೆಯನ್ನಾ ದರೂ ಕೇಳಿದ್ದರೆ ಕೊಟ್ಟು ದಾಟುತ್ತಿದ್ದೆ. ಈಗ ಅದೂ ಇಲ್ಲದ ಹಾಗಾಯಿತು. ಕಾಸು ಕೊಡದೆ ಹೊಳೆ ದಾಟುವೆನು.

ಅಲೆ ಜೋರಾಗಿ ದಂಡೆಗೆ ಹೊಡೆಯುತಿದ್ದವು. ದೋಣಿಯನ್ನು ಹೊಳೆಯಕಡೆಗೆ ತೆಗೆದುಕೊಂಡು ಹೋದಹಾಗೆಲ್ಲ ದಂಡೆಯಕಡೆಗೆ ಅಲೆ ಅಪ್ಪಳಿಸುತ್ತಿದ್ದುವು. ಬಹಳ ಹೊತ್ತು ಅಲೆಗಳ ಸಂಗಡ ಹೋರಾಡಿದ ತರು ವಾಯ ದೋಣಿ ಸ್ವಲ್ಪ ಮುಂದೆಹೋಯಿತು. ಅಲ್ಲಿ ದೋಣಿ ನೀರಿನ ವೇಗಕ್ಕೆ ಸಿಕ್ಕಿ ಕೆಳಗೆ ಹೋಯಿತು. ದ್ಯಾವಪ್ಪನಿಗೆ ನದಿ ದಾಟಬೇಕಾದ್ದ ರಿಂದ ಅಡ್ಡಹಾಕಿದ. ಕೆಳಗೆ ಹೋಗುತ್ತಿದ್ದ ದೋಣಿ ಸುಳುವಿಗೆ ಸಿಕ್ಕಿತು. ಸುಳುವಿನಲ್ಲಿ ಸ್ವಲ್ಪಹೊತ್ತು ತಿರುಗಿ ಮತ್ತೆ ನದಿಯ ವೇಗಕ್ಕೆ ಸಿಕ್ಕಿತು. ಇವನು ಅಡ್ಡಗಟ್ಟುವುದಾಗಲಿ, ನದಿಯನ್ನು ದಾಟುವುದಾಗಲಿ ನಿಂತು ಹೋಯಿತು. ದೋಣಿಸೆಳವು ಬಂದಕಡೆ ಕೊಚ್ಚಿಕೊಂಡು ಹೋಗುತಿತ್ತು. ಕೆಲವುಕಡೆ ಸುಳುವಿನಿಂದ ತಿರುಗುತಿತ್ತು. ಹುಟ್ಟನ್ನು ದೋಣಿಯೊಳಗೆ ಹಾಕಿ ದೇವರನ್ನು ಸ್ಮರಿಸುತ್ತಾ ಕುಳಿತುಕೊಂಡ. ಆ ಕತ್ತಲಿನಲ್ಲಿ ಹೊಳೆಯ ಆರ್ಭಟ, ದೋಣಿಯ ಗತಿ ಎರಡು ವಿನಾ ಇನ್ನು ಯಾವುದರ ಅರಿವೂ ಇರಲಿಲ್ಲ.

ದೋಣಿ ಹೋಗುತ್ತಾ ಇನ್ನೊಂದು ಸುಳುವಿಗೆ ಸಿಕ್ಕಿತು. ಆ ಸುಳಿ ಯೊಂದಿಗೆ ' ದೋಣಿಯೂ ' ' ಗಿರ್ರ ' ನೆ ತಿರುಗಲು ಪ್ರಾರಂಭಿಸಿತು. ಬಯ ಲಾಟದಲ್ಲಿ ಯುದ್ಧಮಾಡುವಾಗ ವೀರರು ಮುಂಡಿಯಿಂದ ' ಗಿರ್ರ ' ನೆ ತಿರು ಗುವುದು ಜ್ಞಾಪಕಕ್ಕೆ ಬಂತು. ಇದು ಆನಂದಕ್ಕೆ ಸಮಯವಲ್ಲ. ಸುಳಿಯಲ್ಲಿ ಸುತ್ತುತಿರುವ ದೋಣಿಯನ್ನು ಹೊಳೆ ಕೆಳಗೆ ಎಳೆದುಕೊಂಡರೆ ಸರಿ, ಅವನ ಜೀವನನಾಟಕ ಮುಗಿದಂತೆಯೇ. ಮೃತ್ಯುವಿನ ಬಾಯೊಳಗೆ ಹೋಗುತ್ತಿ ದ್ದೇನೋ ಎಂಬ ರೀತಿಯಲ್ಲಿ ಭಯಂಕರವಾಗಿತ್ತು. ಇವನ ವಶ ಏನೂ ಇರ ಲಿಲ್ಲ. ಇವನು ಸುಮ್ಮನೆ ಕುಳಿತಿದ್ದ. ಬಹಳ ಹೊತ್ತು ದೋಣಿ ತಿರುಗಿತು. ಒಂದು ದೊಡ್ಡ ಅಲೆ ಎದ್ದು ದೋಣಿಯನ್ನು ಸುಳಿಯಿಂದ ತಪ್ಪಿಸಿತು. ತಪ್ಪಿದ ದೋಣಿ ತಿರುಗಿ ನದಿಯ ವೇಗಕ್ಕೆ ಸಿಕ್ಕಿತು. ನದಿಯ ವೇಗದಲ್ಲಿ

ದೋಣಿ ಅಲ್ಲಾಡುತ್ತಾ, ಕುಣಿಯುತ್ತಾ ನೆಗೆಯುತ್ತಾ ಹೋಯಿತು. ಎಲ್ಲಿಗೆ ಹೋಗುತಿದ್ದೇನೆ, ಎಷ್ಟು ದೂರ ಬಂದೆ ಯಾವುದೂ ತಿಳಿಯದು.

ಒಂದುಸಾರಿ ದೋಣಿ ಸುಳಿಗೆ ಸಿಕ್ಕಿ 'ಗಿರ್‍ರನೆ' ತಿರುಗುವುದು, ಇನ್ನೊಂದು ಸಾರಿ ಪೂರ್ಣವೇಗದಿಂದ ಓಡುವುದು, ಮತ್ತೊಂದುಸಾರಿ ಕುಣಿಯುವುದು. ಹೀಗೆ ಬಹಳದೂರ ಹೋದಮೇಲೆ ದೋಣಿ ಮಧ್ಯನದಿಯಿಂದ ಪಕ್ಕಕ್ಕೆಬಂತು ಪಕ್ಕದಲ್ಲಿ ಮರವೊಟ್ಟು ಬೆಳೆದಿದ್ದವು. ದೋಣಿಯ ಗತಿ ನಿಧಾನವಾಯಿತು. ಹೀಗೆ ಹೋಗುತ್ತಿರುವಾಗ ಮರದರೆಂಬೆಯೊಂದು ಅಡ್ಡ ಬಂತು. ಕೊಂಬೆ ತಡೆದು ದೋಣಿ ನಿಂತಿತು. ದ್ಯಾವಪ್ಪ ಆ ರೆಂಬೆಯನ್ನು ಹಿಡಿದುಕೊಂಡು ಅದರಮೇಲೆ ಹತ್ತಿದ. ಸ್ವಲ್ಪ ಹೊತ್ತಿನಲ್ಲಿ ದೋಣಿ ಅಲ್ಲಿಂದ ಮುಂದೆಹೋಯಿತು, ಕೊಂಬೆಯಮೇಲೆ ಕುಳಿತುಕೊಂಡ ತರುವಾಯ ದ್ಯಾವಪ್ಪನಿಗೆ ಸ್ವಲ್ಪ ಧೈರ್ಯ ಬಂತು. ಬೆಳಕು ಹರಿಯುವತನಕ ಅಲ್ಲಿಯೇ ಕುಳಿತಿದ್ದ. ಸ್ವಲ್ಪ ಬೆಳಕು ಹರಿದ ಮೇಲೆ ರೆಂಬೆಯಿಂದ ಮರದ ಮೇಲೆ ಹೋಗಿ ಕುಳಿತುಕೊಂಡ. ಚೆನ್ನಾಗಿ ಬೆಳಕು ಹರಿಯಿತು. ತಾನು ಕುಳಿತಿದ್ದ ಮರದ ಅರ್ಧಭಾಗ ನೀರಿನಲ್ಲಿ ಮುಳುಗಿದೆ. ರೆಂಬೆಯಿಂದ ರೆಂಬೆಯನ್ನು ದಾಟುತ್ತಾ ನೀರಿನ ಹೊರಗಿರುವ ಮರದ ಮೇಲೆ ಬಂದು ಕೆಳಗೆ ಇಳಿಯಲು ನೋಡುತಿದ್ದ. ಇದ್ದಕ್ಕಿದ್ದಹಾಗೆ ಆ ಗೊಂಡಾರಣ್ಯದಲ್ಲಿ ಮನುಷ್ಯರ ಚೀತ್ಕಾರ ಕೇಳಿಸಿತು. ಮರದಮೇಲಿಂದ ಸುತ್ತಲೂ ನೋಡಿದ. ಕಾಡು, ನೀರು ವಿನಾ ಇನ್ನೇನೂ ಕಾಣಿಸಲಿಲ್ಲ. ಬರಬರುತ್ತಾ ಚೀತ್ಕಾರ ಹೆಚ್ಚಾಯಿತು. ದ್ಯಾವಪ್ಪನಿಗೆ ಮರದಿಂದ ಇಳಿಯಲೂ ಅವಕಾಶವಿಲ್ಲ. ಮರದಿಂದ ದೊಪ್ಪನೆ ಹಾರಿ ಕೂಗು ಕೇಳಿಸುತಿರುವ ಕಡೆಗೆ ಓಡಿದ.

ಸ್ವಲ್ಪದೂರ ಹೋಗುವುದರಲ್ಲಿ ದಟ್ಟವಾದ ಕಾಡು ಮುಗಿಯಿತು. ಅಲ್ಲಿ ಹೊಳೆದಾಟುವ 'ದೋಣಿಕಂಡಿ' ಇದೆ. ಅಲ್ಲಿ ಒಂದು ದೊಡ್ಡ ಮರ ಆ ಮರದ ಕೆಳಗೆ ಒಂದು ಹೆಬ್ಬಾವು ಆತನ ಅಣ್ಣನನ್ನು ಮುಂಡಿಯವರೆಗೆ ನುಂಗಿದೆ. ಅವರ ಕೈಯಲ್ಲಿ ದೊಡ್ಡ ಗಂಟೆದೆ, ಕೂಗುತಿದ್ದಾರೆ. ಅಣ್ಣನನ್ನು ನೋಡಿ ಆಶ್ಚರ್ಯವಾಯಿತು. ದ್ಯಾವಪ್ಪನನ್ನು ನೋಡಿ ತಮ್ಮಯ್ಯಗೌಡರಿಗೆ ಹೇಗಾಯಿತೋ ಹೇಳುವುದು ಕಷ್ಟ. ಅವನನ್ನು ನೋಡಿ ಕೂಗಿಕೊಂಡರು, "ದ್ಯಾವಪ್ಪ, ಸತ್ತೆ ಸತ್ತೆ, ಬಿಡಿಸೊ ಬಿಡಿಸೊ."



ತಮ್ಮಯ್ಯಗೌಡರನ್ನು ಹಾವು ನುಂಗುತ್ತಿರುವುದು.

ಗಾತ್ರದಲ್ಲಿ ಹಾವು ಮನುಷ್ಯನಷ್ಟಿದೆ. ಸುಟ್ಟ ಮರದಹಾಗೆ ಕಪ್ಪು. ನುಂಗುತ್ತ ಹೋದಹಾಗೂ ಅದರ ಮೈ ರಬ್ಬರಿನಹಾಗೆ ಹಿಗ್ಗುತ್ತದೆ. ಒಂದೇ ಸಾರಿ ನುಂಗಲು ಅದಕ್ಕೆ ಸಾಧ್ಯವಿಲ್ಲ. ಮೆಲ್ಲಗೆ ನುಂಗುತಿದೆ. ಅದರ ಬಾಯಿ ಯಿಂದ ತನ್ನ ಅಣ್ಣನನ್ನು ಹೇಗೆ ತಪ್ಪಿಸಬೇಕೆಂಬುದು ತಕ್ಷಣ ತಿಳಿಯಲಿಲ್ಲ. ದೊಡ್ಡ ಕಲ್ಲನ್ನು ಎತ್ತಿ ಹಾವಿನ ಮೇಲೆ ಹಾಕಿ ಕೊಲ್ಲಲು ಕಲ್ಲನ್ನು ಹುಡುಕಿದ. ಕಲ್ಲು ಸಿಗಲಿಲ್ಲ. ಹಾವನ್ನು ಹಾಗೆ ಕೊಂದರೆ ಅಣ್ಣನಿಗೆ ಅಪಾಯ ಸಂಭವಿಸಬಹುದು ಎಂದು ಉತ್ತರ ಕ್ಷಣದಲ್ಲಿ ಹೊಳೆಯಿತು. ಹೀಗೆ ಯೋಚಿಸುವಷ್ಟರಲ್ಲಿ ಹಾವು ಮುಂಡಿ ನುಂಗಿ ತೊಡೆಗೆ ಬಂದಿತು. ಆಕಸ್ಮಾತ್ತಾಗಿ ಜೋಬಿಗೆ ಕೈಹೋಯಿತು. ಜೋಬಿನಲ್ಲಿದ್ದ ಚಾಕು ಕೈಗೆ ಸಿಕ್ಕಿತು. ಚಾಕನ್ನು ಹಾವಿನಬಾಯಿಯ ಸಂದಿಯಲ್ಲಿ ಇಟ್ಟ. ಹಾವು ನುಂಗಿದಹಾಗೆಲ್ಲ ಅದರ ಬಾಯಿಯ ಒಂದು ಕಡೆ ಸೀಳುತ್ತಾ ಬಂತು. ಸ್ವಲ್ಪ ಹೊತ್ತಿನಲ್ಲಿ ಬಾಯಲ್ಲಿ ನುಂಗುವಶಕ್ತಿ ಹೋಯಿತು. ಬಾಯಿಯ ಮತ್ತೊಂದುಕಡೆಯೂ ಸೀಳಿ

ಅಣ್ಣನನ್ನು ಹೊರಗೆ ತೆಗೆದ. ತಮ್ಮಯ್ಯಗೌಡರಿಗೆ ಪ್ರಜ್ಞೆ ಹಾರಿಹೋಗಿತ್ತು. ಅಂಬಿಗರು ಇಷ್ಟರಲ್ಲಿ ದೋಣಿಕಂಡಿಗೆ ಬಂದರು. ತಲೆಗೆ ನೀರುಹಾಕಿ ತಟ್ಟಿದ ಮೇಲೆ ಪ್ರಜ್ಞೆಬಂತು.

ಎಲ್ಲರೂ ಸೇರಿ ಅವರ ಶರೀರವನ್ನು ತೊಳೆದರು. ಸಮೀಪದ ಹಳ್ಳಿಯಿಂದ ಎತ್ತಿನ ಗಾಡಿಯನ್ನು ತರಿಸಿ ಅದರಲ್ಲಿ ತಮ್ಮಯ್ಯಗೌಡರನ್ನು ಕೂರಿಸಿ ಹೊನ್ನುಗದ್ದೆಗೆ ಕರೆದುಕೊಂಡು ಹೋದರು.

---

## ೯. ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ

ದ್ಯಾವಪ್ಪ ಊರಿಗೆ ಬಂದ ಕೂಡಲೇ ಅವನ ಭಾಗದ ಆಸ್ತಿಯನ್ನು ಅವನಿಗೆ ಕೊಡಬೇಕೆಂದು ತಮ್ಮಯ್ಯಗೌಡರು ಯೋಚಿಸಿದ್ದರು. ನೆರೆಹೊರೆಯ ದೊಡ್ಡ ಗೌಡರನ್ನು ಪಂಚಾಯಿತಿಗೆ ಕರೆದಿದ್ದರು. ಗೌಡರೆಲ್ಲ ಅಣ್ಣತಮ್ಮರ ಹಿಸ್ಸೆಯ ಪಂಚಾಯಿತಿಗೆ ಹೊನ್ನುಗದ್ದೆಯಲ್ಲಿ ನೆರೆದರು. ಮಧ್ಯಾಹ್ನ ಮಗುಚಿತು. ಹಿಸ್ಸೆಕೊಡುವ ಅಣ್ಣನಾಗಲಿ, ಹಿಸ್ಸೆ ತೆಗೆದುಕೊಳ್ಳುವ ತಮ್ಮನಾಗಲಿ ಬರಲಿಲ್ಲ. ಬಂದ ನೆಂಟರಿಗೆ ಆಕಳಿಸಿ, ಎಲೆ ಅಡಕೆ ಅಗಿದು ಸಾಕಾಯಿತು. "ಯಜಮಾನರೆಲ್ಲಿ ?" ಎಂದು ಮನೆಯವರನ್ನು ಕೇಳಿದರೆ "ಬೆಳಿಗ್ಗೆ ಇದ್ದರು. ತೋಟದಕಡೆ ಹೋಗಿರಬಹುದು. ಈಗ ಬರುತಾರೆ" ಎಂದು ಉತ್ತರ ಕೊಡುತಿದ್ದರು.

ಮಧ್ಯಾಹ್ನ ಹೊನ್ನುಗದ್ದೆಯವರ ಮನೆಯಮುಂದೆ ಗಾಡಿಯೊಂದು ಬಂದು ನಿಂತಿತು. ಗಾಡಿಯಿಂದ ಇಳಿದ ತಮ್ಮಯ್ಯಗೌಡರು ದ್ಯಾವಪ್ಪ ಇಬ್ಬರೂ ನೆಟ್ಟಗೆ ಮನೆಯೊಳಗೆ ಹೋದರು. ನೆರೆದ ನೆಂಟರಿಗೆ ಇಬ್ಬರೂ ಒಟ್ಟಿಗಿರುವುದನ್ನು ನೋಡಿ ಆಶ್ಚರ್ಯವಾಯಿತು. ಪಾದರಿಯವರ ಮನೆಯಲ್ಲಿ ದ್ಯಾವಪ್ಪ ತಂಗುವನೆಂದು ಪಂಚಾಯಿತರು ನೆನಸಿದ್ದರು.

ದ್ಯಾವಪ್ಪ ಆಗಲೇ ಕ್ರೈಸ್ತಮತಕ್ಕೆ ಸೇರಿಬಿಟ್ಟಿರುವನು. ಒಂದುವೇಳೆ ಆತನು ಸೇರಿರದಿದ್ದರೂ ಅವರ ಹಾಸ್ಟಲಿನಲ್ಲಿ ಇರುವುದೇ ಅವನು ಧರ್ಮ

ಭ್ರಷ್ಟನಾಗಿರುವುದಕ್ಕೆ ಸಾಕು. ಧರ್ಮಭ್ರಷ್ಟನಿಗೆ ಹಿಸ್ಸೆ ಸಿಗದಂತೆ ಮಾಡಬೇಕೆಂದು ಕೆಲವು ಮಂದಿ ತಮ್ಮಯ್ಯಗೌಡರ ಹಿತಚಿಂತಕರಾದ ಪಂಚಾಯಿತರು ಯೋಚಿಸಿದ್ದರು.

ಅಣ್ಣ ತಮ್ಮ ಇಬ್ಬರೂ ಜೊತೆಯಲ್ಲಿ ಮನೆಗೆ ಬಂದರು. ಇಬ್ಬರ ಮುಖದಮೇಲೂ ದ್ವೇಷದ ಚಿಹ್ನೆ ಇಲ್ಲ. ನೆರೆದ ಪಂಚಾಯಿತರ ಉತ್ಸಾಹ ಮುರಿಯಿತು.

ತಮ್ಮಯ್ಯಗೌಡರು ಅಂಗಳದಲ್ಲಿರುವ ತುಳಸಿಕಟ್ಟೆಯ ಮುಂದೆ ಹೋದರು. ತುಳಸಿಕಟ್ಟೆಯ ಮೇಲೆ ಆ ಭಾರವಾದ ಗಂಟನ್ನು ಇಟ್ಟು ನೆರೆದ ಪಂಚಾಯಿತರಿಗೆಲ್ಲ ಕೈಮುಗಿದು ಹೇಳಿದರು :

ನಾನು ಪಾಪಿ. ನಮ್ಮ ದ್ಯಾವಪ್ಪನಿಗೆ ಅಣ್ಣನಾಗಲು ಅಯೋಗ್ಯ. ನಿಮ್ಮನ್ನೆಲ್ಲ ನಮ್ಮ ಪಂಚಾಯಿತಿಗೆ ಕರೆದೆ. ಅವನಿಗೆ ಮೋಸಮಾಡುವ ಉದ್ದೇಶದಿಂದ ಮನೆಯಲ್ಲಿರುವ ನಗನಾಣ್ಯಗಳನ್ನೆಲ್ಲ ನನಗೆ ಬೇಕಾದ ಆಪ್ತರಲ್ಲಿ ನೀವು ಬರುವ ಮುಂಚೆ ಇಟ್ಟುಬರುವ ಉದ್ದೇಶದಿಂದ ಕೋಳಿಕೂಗುವ ಮುಂಚೆ ಹೊರಟೆ. ಹೊಳೆ ತಲುಪುವಾಗ ಇನ್ನೂ ಬೆಳಕು ಹರಿದಿರಲಿಲ್ಲ. ದೋಣಿ ಕಟ್ಟಿತ್ತು ; ದೋಣಿಯವರು ಬಂದಿರಲಿಲ್ಲ. ಗಂಟನ್ನು ಹಿಡಿದುಕೊಂಡು ಅಲ್ಲಿಯೇ ಬಿದ್ದಿರುವ ಒಂದು ಮರದ ತುಂಡಿನ ಮೇಲೆ ಕುಳಿತುಕೊಂಡೆ. ಅದು ಮರದ ತುಂಡಲ್ಲ, ಹೆಬ್ಬಾವು. ನನ್ನನ್ನು ಸೊಂಟದವರೆಗೆ ನುಂಗಿಬಿಟ್ಟಿತು. ಅಷ್ಟರಲ್ಲಿ ದೇವರು ಒಡೆದು ಮೂಡಿದ ಹಾಗೆ ದ್ಯಾವಪ್ಪ ಬಂದ. ಅವನಿಂದ ನನ್ನ ಪ್ರಾಣ ಉಳಿಯಿತು. ಇಷ್ಟು ಅಪಕಾರ ಮಾಡಿದರೂ ಮನಸ್ಸಿಗೆ ತಂದುಕೊಳ್ಳದೆ ನನ್ನನ್ನು ಕಾಪಾಡಿದ. ಅಂಥ ತಮ್ಮನಿಗೆ ಮೋಸ ಮಾಡುತಿದ್ದೆ. ದೇವರು ಗೃಹದ್ರೋಹದಿಂದ ನನ್ನನ್ನು ಕಾಪಾಡಿದ. ನಿಮ್ಮ ಸಮಕ್ಷಮ ಈ ಗಂಟನ್ನು ಅವನಿಗೆ ಕೊಡುತ್ತೇನೆ.

" ಕುಟುಂಬದ ಮೇಲೆ ಹತ್ತುಸಾವಿರ ರೂಪಾಯಿ ಸಾಲ ತೋರಿಸಿರುವೆನು. ಅದು ಸುಳ್ಳು ಲೆಕ್ಕ. ಒಟ್ಟು ಕುಟುಂಬದ ಲೆಖ್ಖದಲ್ಲಿ ಮೂರುಸಾವಿರ ರೂಪಾಯಿ ನಗದಿದೆ. ನಾವು ಹಿಸ್ಸೆಯಾಗುವುದಿಲ್ಲ."

ಹಿಸ್ಸೆಗೆ ಬಂದ ಪಂಚಾಯಿತರ ಮುಖದ ಬಣ್ಣ ಕುಂದಿತು. " ಬಹಳ ಒಳ್ಳೆಯದು. ನೀವು ಅಣ್ಣ ತಮ್ಮ ಒಟ್ಟಿಗೆ ಸುಖವಾಗಿದ್ದರೆ ನಮಗೆಲ್ಲ ಬಹಳ

ಸಂತೋಷ" ಎಂದು ಹೇಳುತ್ತಾ ಪಂಚಾಯಿತರು ಒಬ್ಬೊಬ್ಬರಾಗಿ ಅಲ್ಲಿಂದ ಸರಿದರು.

ತಮ್ಮೇಗೌಡರು ಪಾದರಿಯನ್ನು ಕರೆಯಿಸಿ ಅವರ ಉಪಕಾರಕ್ಕೆ ಕೃತಜ್ಞತೆಯನ್ನು ತೋರಿಸಿ, ಕ್ರೈಸ್ತಸಂಘದವರು ಖರ್ಚುಮಾಡಿದ ಹಣವನ್ನೆಲ್ಲ ಅವರಿಗೆ ಪಾವತಿಮಾಡಿದರು. ದ್ಯಾವಪ್ಪನಿಗೆ ತಾವೇ ವಿದ್ಯಾಭ್ಯಾಸ ಮಾಡಿಸುವುದಾಗಿ ತಿಳಿಸಿದರು. ಪಾದರಿಯವರು ತಮ್ಮ ಸಂತೋಷವನ್ನು ಸೂಚಿಸಿದರು. ದ್ಯಾವಪ್ಪ ಬೆಂಗಳೂರಿಗೆ ಹಿಂದಿರುಗಿದ.

---

## ೧೦. ಹಬ್ಬದೂಟ

ಹಳ್ಳಿಯಿಂದ ದ್ಯಾವಪ್ಪ ಪಟ್ಟಣಕ್ಕೆ ಬಂದಿದ್ದರೂ ಅವನ ತುಂಟ ಸ್ವಭಾವ ಸಂಪೂರ್ಣವಾಗಿ ಹೋಗಿರಲಿಲ್ಲ. 'ಫುಟ್ ಪಾತಿನಮೇಲೆ ನಡೆಯಿರಿ' ಎಂದು ಬರೆದಿದ್ದರೆ ದ್ಯಾವಪ್ಪ ನಡೆಯುವುದು ರಾಂಗ್ ಪಾತಿನ ಮೇಲೆ.

ಫುಟ್ ಪಾತಿನಲ್ಲಿ ದ್ಯಾವಪ್ಪ ಸೈಕಲ್ಲಿನಮೇಲೆ ಹೋಗುವನು, ಮಧ್ಯ ರಸ್ತೆಯಮೇಲೆ ನಡೆದುಕೊಂಡು ಹೋಗುವನು. ನಡವಳಿಕೆ ಹೀಗಿರುವಾಗ ಪೋಲೀಸಿನವರ ಕೈಗೆ ಬೀಳದಿರುವನೆ? ಅವರ ಕೈಗೆ ಸಿಕ್ಕಿ ತಪ್ಪಿಸಿಕೊಳ್ಳ ಬೇಕಾಯಿತು. ತಪ್ಪಿಸಿಕೊಳ್ಳಲು ಎರಡು ಮಾರ್ಗಗಳಿದ್ದವು. ಮೊದಲನೆಯದು ರಾಜಮಾರ್ಗ: ಎರಡನೆಯದು ಕಳ್ಳಮಾರ್ಗ.

ತಿಳಿದಿದ್ದರೂ ರಾಂಗ್ ಸೈಡಿನಲ್ಲಿ ಹೋಗುತಿದ್ದೆ ಎಂದರೆ ಶಿಕ್ಷೆಗೆ ಗುರಿಯಾಗಬೇಕು. ಸುಳ್ಳುಹೇಳಿಯೋ ಲಂಚಕೊಟ್ಟೋ ತಪ್ಪಿಸಿಕೊಳ್ಳುವುದು ಕಳ್ಳಮಾರ್ಗ. ದ್ಯಾವಪ್ಪನಿಗೆ ರಾಂಗ್ ಪಾತಿನಲ್ಲಿ ಹೋಗುವುದು ಇಷ್ಟ. ಸುಳ್ಳು ಹೇಳುವುದು ಇಷ್ಟವಿಲ್ಲ. ಹೀಗೆ ಎರಡು ವಿರುದ್ಧ ಸ್ವಭಾವಗಳಿಗೆ ತಿಕ್ಕಾಟ ಆರಂಭವಾಯಿತು. ಬೆಂಗಳೂರಿಗೆ ಬಂದ ಸ್ವಲ್ಪ ದಿನದಲ್ಲಿಯೇ ರಾಂಗ್ ಸೈಡಿನಲ್ಲಿ ಹೋಗುವ ಮನೋಭಾವ ಹೊರಟು ಹೋಯಿತು.

ಒಂದು ಸಂಜೆ ಉದ್ಯಾನವನದಲ್ಲಿ ದ್ಯಾವಪ್ಪ ತಿರುಗಾಡುತಿದ್ದ. 'ದಾರಿಯಮೇಲೆ ನಡೆಯಿರಿ' ಎಂದು ಪ್ರತಿಯೊಂದು ಕಡೆಯೂ ಬೋರ್ಡು ಬರೆದಿತ್ತು. ಬೋರ್ಡನ್ನು ಓದುತ್ತಾ ದಾರಿ ಬಿಟ್ಟು ಹುಲ್ಲಿನಮೇಲೆಯೇ ತಿರುಗುತಿದ್ದ. ಅವನನ್ನು ನೋಡಿ ಮಾಲಿ," ದಾರಿಯಮೇಲೆ ನಡೆಯಿರಿ ಸ್ವಾಮಿ " ಎಂದ.

" ದಾರಿಯಮೇಲೆ ನಡೆಯುವುದಕ್ಕೆ ನಾನು ಇಷ್ಟುದೂರ ಬರಬೇಕೆ? ಮರದ ಕೆಳಗೆ ಹುಲ್ಲಿನಮೇಲೆ ಕುಳಿತುಕೊಳ್ಳುವುದಕ್ಕೆ ಬಂದಿರುವೆನು. ಸ್ವಲ್ಪಹೊತ್ತು ಹುಲ್ಲಿನಮೇಲೆ ತಿರುಗಾಡಿ ತರುವಾಯ ದಣಿವಾರಿಸಿಕೊಳ್ಳುವೆನು."

" ಹುಲ್ಲಿನಮೇಲೆ ನಡೆದು ನಡೆದು ದಾರಿಮಾಡಿ ಬಿಟ್ಟಿದ್ದಾರೆ. ರಸ್ತೆ ಇದೆ; ಜನರು ಅದರಮೇಲೆ ನಡೆಯುವುದಿಲ್ಲ; ಹುಲ್ಲಿನಮೇಲೆ ನಡೆಯುತ್ತಾರೆ."

" ಒಂದೇಕಡೆ ನಡೆದು ದಾರಿಮಾಡುವವರ ತಂಟೆಗೆ ನೀನು ಹೋಗುವುದಿಲ್ಲ. ದಣಿವಾರಿಸಿಕೊಳ್ಳಲು ಬರುವ ನನ್ನಂಥವನ ಮೇಲೆ ರೇಗಿಬೀಳುವೆ."

" ಯಾರಿಗೆ ನಾವು ಹೇಳುವುದು, ಯಾರಿಗೆ ಬಿಡುವುದು? ಬರುವವರೆಲ್ಲ ನಿಮ್ಮಂಥವರೆ."

" ದಾರಿಯಮೇಲೆ ನಡೆದು ಬೇಸರವಾದ್ದರಿಂದ ಹುಲ್ಲಿನಮೇಲೆ ನಡೆಯುವದಕ್ಕಾಗಿ ಉದ್ಯಾನವನಗಳಿಗೆ ಬರುವುದು."

" ನೀವು ಉದ್ಯಾನವನಗಳಿಗೆ ಬಂದರೆ ಹುಲ್ಲುಮೆಟ್ಟಿ ದಾರಿ ಮಾಡಬಾರದು. ಸಾಹೇಬರು ನಮ್ಮನ್ನು ಬೈಯುತ್ತಾರೆ" ಎಂದು ಹೇಳುತ್ತಾ ಮಾಲಿ ತನ್ನ ಕೆಲಸದಮೇಲೆ ಹೋದ.

ತನ್ನ ಹಠ ಸಾಧಿಸುವುದಕ್ಕಾಗಿಯೋ ಎಂಬ ರೀತಿಯಲ್ಲಿ ದ್ಯಾವಪ್ಪ ಅಲ್ಲಿಯೇ ಕುಳಿತುಕೊಂಡ. ತನ್ನ ಹಠ ಸಾಧಿಸಿ ಹಾಸ್ಟಲಿಗೆ ಹಿಂದಿರುಗುವಾಗ ಕತ್ತಲು ಕವಿದಿತ್ತು. ಆ ತಿಂಗಳು ಹಾಸ್ಟಲಿಗೆ ಅವನೆ ಪ್ರಿಫೆಕ್ಟ್. ಆದ್ದರಿಂದ ಹುಡುಗರೆಲ್ಲ ಹಾಸ್ಟಲಿನಲ್ಲಿ ಕಾದಿದ್ದರು. ಅವನು ಬಂದ ತಕ್ಷಣ ಎಲ್ಲ ಹುಡು

ಗರು ಅವನನ್ನು ಮುತ್ತಿಗೆ ಹಾಕಿದ್ದನ್ನು ನೋಡಿ ದ್ಯಾವಪ್ಪನಿಗೆ ಆಶ್ಚರ್ಯ ವಾಯಿತು. ಯಾವ ಕಾರಣದಿಂದ ಹೀಗೆ ಮುತ್ತಿಗೆ ಹಾಕುತ್ತಾರೆಂದು ತಿಳಿಯದು. ಸೋಮೆಗೌಡ ಮುಂದೆ ಬಂದು ಹೇಳಿದ," ಏಕೆ ದ್ಯಾವಪ್ಪ ಇಷ್ಟು ಹೊತ್ತಾಯಿತು ?''

ದ್ಯಾವಪ್ಪನ ಯಾವ ಉತ್ತರವನ್ನೂ ನಿರೀಕ್ಷಿಸದೆ ರಾಮಯ್ಯಗೌಡ ಹೇಳಿದ," ಯಾವುದೋ ಮ್ಯಾಚ್ ನೋಡಲಿಕ್ಕೆ ಹೋಗಿರಬಹುದು."

" ಇಲ್ಲ, ಏನೋ ಒಂದು ಕೆಲಸ ನಡೆಯಿತು. ಆದ್ದರಿಂದ ಹೊತ್ತಾಯಿತು " ಎಂದು ದ್ಯಾವಪ್ಪ ಹೇಳಿದ.

ನೆರೆದ ಹುಡುಗರಲ್ಲಿ ಕುತೂಹಲ ಹುಟ್ಟಿತು. ನಡೆದ ವಿಚಾರವನ್ನು ತಿಳಿಸಲು ಬಲವಂತ ಮಾಡಿದರು. ಪಾರ್ಕಿನಲ್ಲಿ ಮೂಲಿಯ ಹತ್ತಿರ ತೋರಿಸಿದ ಹಠಸಾಧನೆಯನ್ನು ವರ್ಣಿಸಿದ. ಅವನು ವರ್ಣಿಸಿದ ಹಾಗೆಲ್ಲ ವಿದ್ಯಾರ್ಥಿಗಳು ನಗುತಿದ್ದರು. ಅವರೊಂದಿಗೆ ಇವನು ನಗುತ್ತವರ್ಣಿಸಿದ. ಆ ಕಥೆಯಿಂದ ಬೇಸರಗೊಂಡ ಗೋವಿಂದೆಗೌಡ ಹೇಳಿದ," ಹುಲಿ ಹೊಡೆದು ಚರ್ಮ ಹೊದೆಯಬೇಕು ದ್ಯಾವಪ್ಪ, ಇವಲ್ಲ ಗುಳ್ಳೆನರಿಯ ಕೆಲಸ; ತುಂಟತನ."

ಇದನ್ನು ಕೇಳಿ ಹುಡುಗರು ಗೊಳ್ಳೆಂದು ನಕ್ಕರು. ದ್ಯಾವಪ್ಪನಿಗೆ ತನ್ನ ತಪ್ಪು ತನಗೆ ತಿಳಿಯಿತು. ಕುಗ್ಗಿ ನೆಲಸಮನಾದ. ಗೋವಿಂದೆಗೌಡನ ಮಾತು ನಿಜವೆನಿಸಿತು. ತನ್ನಮೇಲೆ ತನಗೇ ಬೇಸರ ಉಂಟಾಯಿತು. ತನಗೆ ಇಷ್ಟುನಾಚಿಕೆ ಉಂಟಾಗುವಾಗ ಇತರರಿಗೆ ಎಷ್ಟು ಆಗಬಹುದು ? ಅವರು ತಮ್ಮ ಕರ್ತವ್ಯ ಪರಿಪಾಲನೆ ಮಾಡುತಿರುವರು. ತಾನು ಮಾಡುತಿರುವುದು ತುಂಟತನ ಎಂದುಕೊಂಡ.

ಈ ಗಲಾಟೆಯಲ್ಲಿ ಹುಡುಗರು ಅವನಿಗಾಗಿ ಇದುವರೆಗೂ ಕಾದಿದ್ದ ವಿಚಾರ ಮರೆತಿದ್ದರು. ಮಲ್ಲೇಗೌಡ ಜ್ಞಾಪಕಕ್ಕೆ ತಂದು ಹೇಳಿದ, " ಒಳ್ಳೆ ಪ್ರಿಫೆಕ್ಟ್ ಕಣಯ್ಯ. ಇದುವರೆಗೂ ನಿನ್ನನ್ನು ಹುಡುಕಿಸಾಕಾಯಿತು. ನಾಳೆ ರಜ. ಬೆಳಗ್ಗೆ ತಿಂಡಿ ಏನು ಮಾಡಿಸುವೆ ? ಮಧ್ಯಾಹ್ನ ಊಟಕ್ಕೆ ಏನು ?"

ಕೃಷ್ಣಪ್ಪ ಹೇಳಿದ : " ಬೆಳಗ್ಗೆ ಕೇಸರಿಬಾತು, ಒಡೆ ; ಇಲ್ಲದಿದ್ದರೆ ಚಪಾತಿ ಪಲ್ಯ ಮಾಡಿಸು."

" ಬೆಳಗ್ಗೆ ತಿಂಡಿ ಏನಾದರೂ ಮಾಡಿಸು. ಊಟಕ್ಕೆ ಮಾತ್ರ ವೆಜಿಟ್ ಬಲ್ ಬಾತ್, ಕೀರು, ಏನಾದರೊಂದು ಕಾರ ಇರಲಿ " ಎಂದು ಚಿಕ್ಕ ಪುಟ್ಟಣ್ಣ ಹೇಳಿದ.

ನಮ್ಮ ನಾರಾಯಣಗೌಡನಿಗೆ ಇಂಥ ಊಟ ರುಚಿಸದು. ಅವನು ಚಿಕ್ಕಪುಟ್ಟಣ್ಣನ ಮಾತು ಕೇಳಿ ನಕ್ಕು ಹೇಳಿದ, " ಈ ತಿಂಗಳು ಒಂದು ಹಬ್ಬವೂ ಬರಲಿಲ್ಲ. ದ್ಯಾವಪ್ಪ ಪ್ರಿಫೆಕ್ಟ್ ಆದ. ಒಳ್ಳೇ ಊಟವನ್ನಾದರೂ ಮಾಡಿಸುತ್ತಾನೆ ಎಂದು ನೆನಸಿದ್ದೆವು. ಈ ತಿಂಗಳು ಕಳೆಯುತ್ತಾ ಬಂತು. ಒಂದು ಹಬ್ಬದೂಟವೂ ಸಿಗಲಿಲ್ಲ. ಇನ್ನು ಗಣಪತಿ ಹಬ್ಬ ಬಂತು. ಹಾಸ್ಟಲಿನಲ್ಲಿ ಗಣಪತಿ ಕೂರಿಸಿದ ಮೇಲೆ ಮಾಂಸ ತಿನ್ನುವ ಹಾಗಿಲ್ಲ. ಆದ್ದರಿಂದ ಪಲಾವಾಗಲಿ, ಚಾಪ್ಸ್ ಮತ್ತು ಚಪಾತಿಯಾಗಲಿ ಮಾಡಿಸಲಿ,"

ಹಾಸ್ಟಲಿನ ವಿದ್ಯಾರ್ಥಿಗಳಿಗೆಲ್ಲ ಇದು ಒಪ್ಪಿಗೆ ಆಯಿತು.

ದ್ಯಾವಪ್ಪ ಕೇಳಿದ: " ನಾಳೆ ಯಾವ ಹಬ್ಬ ? "

" ನಾಳೆ ಯಾವ ಹಬ್ಬವೂ ಇಲ್ಲ ದ್ಯಾವಪ್ಪನವರೇ! ಭಾನುವಾರ ಗಣೇಶನ ಹಬ್ಬವಾದ್ದರಿಂದ ಗಣೇಶನನ್ನು ಬಿಡುವವರೆಗೂ ಮಿಲಿಟರಿ ಊಟವಿಲ್ಲ. ಗಣಪತಿ ಹಬ್ಬ ಮುಂದಿನ ತಿಂಗಳು ಬೀಳುತ್ತದೆ. ಈ ತಿಂಗಳು ಹಬ್ಬವೊಂದೂ ಬರಲಿಲ್ಲ. ನಿಮ್ಮ ಪ್ರಿಫೆಕ್ಟ್‌ಷಿಪ್ಪಿನಲ್ಲಿ ಒಂದು ಹಬ್ಬದ ಊಟವಾದರೂ ಆಗಲಿ " ಮಲ್ಲೇಗೌಡನೆಂದ.

ವಿದ್ಯಾರ್ಥಿಗಳನ್ನೆಲ್ಲ ದ್ಯಾವಪ್ಪ ನೋಡಿದ. ಅವರೂ ದ್ಯಾವಪ್ಪನನ್ನು ನೋಡಿದರು. ಎಲ್ಲರಲ್ಲಿಯೂ ಹಬ್ಬದ ಊಟ ಮಾಡಬೇಕೆಂಬ ಆಶೆ. ದ್ಯಾವಪ್ಪ ಹೇಳಿದ, " ಮ್ಯಾನೇಜರನ್ನು ಕೇಳಿದಿರಾ ! ಅವರು ಏನೆಂದರು?"

ಅವರೇನು ಹೇಳುವರು ? ದುಡ್ಡು ಕೊಡುವವರು ನಾವು ; ತಿನ್ನುವವರು ನಾವು. ಎಲ್ಲರ ರುಜು ಮಾಡಿಸಿ ವಾರ್ಡನ್ನಿಗೆ ಕಳುಹಿಸಿ " ಎಂದು ಗೋವಿಂದೆಗೌಡ ಹೇಳಿದ.

ಗುಂಪಿನಿಂದ ಮುಂದೆ ನುಗ್ಗಿ ಬಂದು ಮಾದಯ್ಯ ಹೇಳಿದ, " ಅದು ಸರಿ, ಇಪ್ಪತ್ತನಾಲ್ಕನೆಯ ರೂಮಿನವರು ಒಂಭತ್ತನೆಯ ರೂಮಿನವರು ಅದಕ್ಕೆ ರುಜು ಮಾಡಬೇಕಲ್ಲ. ತಿನ್ನುವಾಗ ತಿನ್ನುತ್ತಾರೆ. ಬೋರ್ಡಿಂಗ್

ಚಾರ್ಜು ಕೊಡುವಾಗ—ಈ ತಿಂಗಳಲ್ಲಿ ಹೆಚ್ಚು ಬಿತ್ತೆಂದು ವಾರ್ಡನರ ಹತ್ತಿರ ದೂರು ಹೇಳುತ್ತಾರೆ.''

ಮಾದಯ್ಯನ ಮಾತನ್ನು ಕೇಳಿ ಹುಡುಗರ ಗಲಭೆ ಸ್ವಲ್ಪ ಶಾಂತ ವಾಯಿತು.

" ಬೋರ್ಡಿಂಗ್ ಚಾರ್ಜು ಹೆಚ್ಚಾಗುವುದಕ್ಕೂ ನಮಗೂ ಸಂಬಂಧ ವಿಲ್ಲ. ಮ್ಯಾನೇಜರಿದಾರೆ, ಅವರಿದಾರೆ " ಎಂದು ಗೋವಿಂದೆಗೌಡ ಹೇಳಿದ. ಮಾದಯ್ಯ ಅದನ್ನು ವಿರೋಧಿಸುತ್ತಾ ಹೇಳಿದ, " ಅಧಿಕಸಮಂದಿ ಮತ ದಾರರು ಒಪ್ಪುವ ತತ್ವದಮೇಲೆ ಇದು ನಡೆಯುವ ಕಾರ್ಯವಲ್ಲ. ಇಲ್ಲಿ ಎಲ್ಲ ರಿಗೂ ಸರಿಸಮಾನವಾದ ಅಧಿಕಾರವಿದೆ! ಒಬ್ಬರು ವಿರೋಧಮಾಡಿದರೆ ಸಾಕು, ವಾರ್ಡನ್ನು ಒಪ್ಪುವುದಿಲ್ಲ. ನಿಮ್ಮ ಹಬ್ಬದೂಟಕ್ಕೆ ಕಲ್ಲುಬೀಳುತ್ತದೆ. ಆದ್ದರಿಂದ ಎಲ್ಲರ ರುಜು ಇರಬೇಕು."

ಅಲ್ಲಿರುವ ವಿದ್ಯಾರ್ಥಿಗಳನ್ನೆಲ್ಲ ನೋಡಿ ದ್ಯಾವಪ್ಪ ಹೇಳಿದ, ಇಲ್ಲಿ ಇಪ್ಪತ್ತುನಾಲ್ಕು ಮತ್ತು ಒಂಭತ್ತನೆಯ ರೂಮಿನವರು ಯಾರಾದರೂ ಇದ್ದಾರೆಯೇ ? "

ಹುಡುಗರ ಗುಂಪಿನಿಂದ ಯಾವ ಉತ್ತರವೂ ಬರಲಿಲ್ಲ. ಕೆಂಚೆಗೌಡ ಹೇಳಿದ, " ಹುಂ! ಅವರೇಕೆ ಇಷ್ಟು ಹೊತ್ತಿನಲ್ಲಿ ಇಲ್ಲಿಗೆ ಬಂದಾರು. ಕಿಟಕಿ ಬಾಗಿಲುಗಳನ್ನು ಮುಚ್ಚಿಕೊಂಡು ಓದುತ್ತಿರಬಹುದು.''

" ಆಗಲಿ, ನಾನು ನೋಟೀಸು ಕಳುಹಿಸಿ ಎಲ್ಲರಿಂದಲೂ ರುಜು ತೆಗೆದುಕೊಳ್ಳುತ್ತೇನೆ " ಎಂದು ದ್ಯಾವಪ್ಪ ಹೇಳಿದ.

ಮಲ್ಲೇಗೌಡ ದ್ಯಾವಪ್ಪನ ಬೆನ್ನುತಟ್ಟಿ ಹೇಳಿದ : " ನೋಡಿ : ಗ್ರ್ಯಾಂಡ್‌ಫೀಸ್ಟ್ ಮಾಡಿಸಬೇಕು."

" ಸಿಹಿ, ಕಾರ ಎರಡೂ ಇರಲಿ " ಗೋವಿಂದೆಗೌಡ ಎಂದ.

---

# ಔತಣದಿಂದ ಊಟ ಕಳೆದುಕೊಂಡದ್ದು

ದ್ಯಾವಪ್ಪ ನೋಟೀಸನ್ನು ಬರೆದು ಹುಡುಗರ ರುಜುವಿಗೆ ಜವಾನ ನನ್ನು ಕರೆಯುತ್ತಾ ರೂಮಿನಿಂದ ಹೊರಗೆ ಬಂದ.

ಮ್ಯಾನೇಜರು ದ್ಯಾವಪ್ಪನನ್ನು ಕರೆಯುತ್ತಾ ಅವನ ರೂಮಿನಕಡೆ ಬರುತ್ತಿದ್ದರು. ಅವರ ಜೊತೆಯಲ್ಲಿ ಇಬ್ಬರು ಅಪರಿಚಿತ ವ್ಯಕ್ತಿಗಳಿದ್ದರು. ದ್ಯಾವಪ್ಪನ ಪರಿಚಯವನ್ನು ಅವರಿಗೆ ಮಾಡಿಕೊಟ್ಟು, ಅವರ ಪರಿಚಯದ ವಿಚಾರದಲ್ಲಿ ಮ್ಯಾನೇಜರು ಹೇಳಿದರು, "ಇವರು ಕ್ಷಾಮನಿವಾರಣಾ ಸಮಿತಿಯ ಕಾರ್ಯದರ್ಶಿಗಳು ; ಮತ್ತೊಬ್ಬರು ಸ್ವಯಂಸೇವಕರು. ಮಳೆ ಬೆಳೆಗಳಿಲ್ಲದೆ ಜನರು ಕ್ಷಾಮಕ್ಕೆ ಗುರಿಯಾಗಿದ್ದಾರೆ. ಸಾಧ್ಯವಾದಷ್ಟು ಹಣ ಶೇಖರಿಸಿ ಅವರಿಗೆ ಸಹಾಯ ಮಾಡಬೇಕೆಂದು ಒಂದು ಸಮಿತಿ ಸ್ಥಾಪಿಸಿ ದ್ದಾರೆ. ಆ ಸಂಬಂಧದಲ್ಲಿ ಇಲ್ಲಿಗೆ ಬಂದಿರುತ್ತಾರೆ."

"ಅನೇಕ ಕಡೆಗಳಲ್ಲಿ ವಿದ್ಯಾರ್ಥಿಗಳು ಕ್ಷಾಮನಿವಾರಣಾ ಸಮಿತಿಗೆ ತುಂಬಾ ಸಹಾಯ ಮಾಡಿರುತ್ತಾರೆ. ಶಕ್ತಿ ಇದ್ದಷ್ಟು ಅವರು ಧನಸಹಾಯ ಮಾಡಬಹುದು. ಅಥವಾ ಜನರಿಂದ ಹಣ ವಸೂಲ್ಮಾಡಲು ನಮಗೆ ಸಹಾಯ ಮಾಡಬಹುದು. ಸಾಧ್ಯವಿದ್ದರೆ ಎರಡನ್ನೂ ಮಾಡಬಹುದು" ಎಂದು ಕಾರ್ಯದರ್ಶಿಗಳು ಹೇಳಿದರು.

ದ್ಯಾವಪ್ಪ ಸ್ವಲ್ಪ ಹೊತ್ತು ಸುಮ್ಮನಿದ್ದು ಮ್ಯಾನೇಜರನ್ನು ನೋಡಿದ. ಮ್ಯಾನೇಜರು ಸುಮ್ಮನಿದ್ದರು. ತರುವಾಯ ದ್ಯಾವಪ್ಪ ಹೇಳಿದ, "ಈಗ ತುಂಬಾಹೊತ್ತಾಗಿದೆ. ಎಲ್ಲರೂ ಓದುತಿದಾರೆ. ನಾಳೆ ರಜವಿದೆ. ತಾವು ಬೆಳಗ್ಗೆ ದಯಮಾಡಿಸಿದರೆ ನಾವು ಯಾವ ರೀತಿಯಲ್ಲಿ ನಿಮಗೆ ಸಹಾಯ ಮಾಡಬಹುದು ಎಂಬ ವಿಚಾರವನ್ನು ತಿಳಿಸಬಲ್ಲೆವು."

ಕಾರ್ಯದರ್ಶಿಗಳು ಒಪ್ಪಿ ಹೊರಟುಹೋದರು. ದ್ಯಾವಪ್ಪ ಗ್ರ್ಯಾಂಡ್ ಫೀಸ್ಟಿನ ಒಪ್ಪಿಗೆಗೂ, ಕ್ಷಾಮನಿವಾರಣಾ ಸಮಿತಿಗೆ ಧನಸಹಾಯಕ್ಕೂ ಎರಡು ನೋಟೀಸನ್ನು ಕಳುಹಿಸಿದ. ಇಪ್ಪತ್ತನಾಲ್ಕು ಮತ್ತು ಒಂಭತ್ತ ನೆಯ ರೂಮಿನವರಿಗೆ ಹಬ್ಬದ ನೋಟೀಸನ್ನು ತೋರಿಸಬಾರದೆಂದು ತಿಳಿಸಿದ.

ಗ್ರ್ಯಾಂಡ್ ಫೀಸ್ಟಿನ ನೋಟೀಸಿಗೆ ಎರಡು ರೂಮಿನವರು ವಿನಾ ಎಲ್ಲರೂ ರುಜು ಮಾಡಿದ್ದರು. ಸಮಿತಿಗೆ ಎರಡು ರೂಪಾಯಿ ವಸೂಲಾಗಿತ್ತು.

ದ್ಯಾವಪ್ಪ ಮತ್ತು ಮ್ಯಾನೇಜರು ಇಬ್ಬರೂ ವಾರ್ಡನ್ ಹತ್ತಿರ ಹೋದರು. ಹುಡುಗರು ರುಜುಮಾಡಿರುವ ಕಾಗದವನ್ನು ನೋಡಿ ವಾರ್ಡನ್ ಕನ್ನಡಕವನ್ನು ಮೇಜಿನ ಮೇಲೆ ಇಡುತ್ತಾ ಹೇಳಿದರು, "ಇಪ್ಪತ್ನಾಲ್ಕನೆಯ ಮತ್ತು ಒಂಭತ್ತನೆಯ ರೂಮಿನ ಹುಡುಗರ ರುಜು ಎಲ್ಲಿ?"

ಅವರ ಕೈಯಿಂದ ಕಾಗದವನ್ನು ತೆಗೆದುಕೊಳ್ಳುತ್ತಾ ದ್ಯಾವಪ್ಪ ಹೇಳಿದ, "ನಾಳೆ ರಜವಾದ್ದರಿಂದ ಊರಿಗೆ ಹೋಗಿದ್ದಾರೆ."

ದ್ಯಾವಪ್ಪನ ಕೈಯಿಂದ ತಮ್ಮ ಕೈಗೆ ಕಾಗದವನ್ನು ತೆಗೆದುಕೊಂಡು ಕನ್ನಡಕವನ್ನು ಮೂಗಿನ ಮೇಲೆ ಏರಿಸಿ ಹಿಂದೆ ಮುಂದೆ ಕಾಗದವನ್ನು ತಿರುಗಿಸಿ ನೋಡಿ ವಾರ್ಡನ್ ಹೇಳಿದರು, "ಬರಿ ಊಟ ಎಂದು ಬರೆದಿದೆ ಎಂಥಾ ಊಟ ? "

"ಅದನ್ನು ಹೇಗೆ ಬರೆಯಲು ಸಾಧ್ಯ, ನೀವೇ ಹೇಳಿ. ನಾಳೆ ರಜಾ ಎಂದು ತಿಳಿದಿದ್ದು ಇಂದು ಸಾಯಂಕಾಲ. ಹಬ್ಬದ ಊಟವಾಗಬೇಕೆಂದು ತೀರ್ಮಾನವಾಗಿದ್ದು ಈಗ. ಬೆಳಗ್ಗೆ ಮುಂಚೆ ಎಂಥ ಪದಾರ್ಥಗಳು ಸಿಗುತ್ತವೆಯೋ ಅದರ ಮೇಲೆ ಹೋಗುತ್ತದೆ."

"ಎಷ್ಟು ದುಡ್ಡು ಬೇಕಾಗಬಹುದು ?"

"ಮೂವತ್ತೈದು ರೂಪಾಯಿ ಸಾಕಾದೀತು."

"ಹೆಚ್ಚಾಗುತ್ತದೆ, ಮೂವತ್ತು ಮಾಡುತ್ತೇನೆ" ಎಂದು ವಾರ್ಡನ್‌ರವರು ಮೂವತ್ತು ರೂಪಾಯಿ ಮಾಡಿದರು.

ಮಾರನೆಯದಿನ ಬೆಳಗ್ಗೆ ತಿಂಡಿಗೆ ಇಡ್ಲಿ ಮಾಡಿರುವುದನ್ನು ನೋಡಿ ಅನೇಕ ಮಂದಿ ಹುಡುಗರು ರೇಗಿಬಿದ್ದರು. ಅವರನ್ನು ಸಮಾಧಾನ ಪಡಿಸುತ್ತಾ ದ್ಯಾವಪ್ಪ ಹೇಳಿದ, "ನಿನ್ನೆ ಬಹಳ ಹೊತ್ತಾದಮೇಲೆ ವಿಚಾರ ತಿಳಿದಿದ್ದರಿಂದ ಬೇರೆ ತಿಂಡಿ ಮಾಡಿಸಲು ಸಾಧ್ಯವಾಗಲಿಲ್ಲ. ಈ ಹಣವನ್ನೂ ಸೇರಿಸಿ ಊಟ ಬಹಳ ಚೆನ್ನಾಗಿ ಮಾಡಿಸಲಾಗುತ್ತದೆ.''

ಗಂಟೆ ಒಂಭತ್ತಾದರೂ ಹಬ್ಬದೂಟಕ್ಕೆ ಸಾಮಾನುಗಳೊಂದೂ ಬರಲಿಲ್ಲ. ಅಡುಗೆಯವನು ಕಾದುಕಾದು ಮ್ಯಾನೇಜರ ಹತ್ತಿರ ಹೋಗಿ

ಹೇಳಿದ, "ಹೊತ್ತಾಗಿ ಹೋಯಿತು, ಸಾಮಾನು ಒಂದೂ ಬರಲಿಲ್ಲ. ಏನು ಮಾಡಬೇಕೆಂಬುದೊಂದೂ ಹೇಳಲಿಲ್ಲ. ಆಮೇಲೆ ಹೊತ್ತಾಯಿತು ಎಂದು ಅವಸರ ಮಾಡುವುದಕ್ಕೆ ಪ್ರಾರಂಭಿಸುತ್ತೀರಿ, ನನ್ನಿಂದ ಮಾತಿಲ್ಲ."

"ಈ ಊಟದ ಜವಾಬುದಾರಿ ಎಲ್ಲ ಪ್ರಿಫೇಕ್ಟರದು, ಅವರನ್ನೇ ಹೋಗಿ ವಿಚಾರಿಸು" ಎಂದು ಮ್ಯಾನೇಜರು ಹೇಳಿದರು.

ದ್ಯಾವಪ್ಪನನ್ನು ಹುಡುಕುತ್ತಾ ಅಡುಗೆಯವನು ಅವನ ರೂಮಿಗೆ ಬಂದು, "ಹಬ್ಬದೂಟ ಎಂದು ಎಲ್ಲರೂ ಕುಣಿಯುತಿದಾರೆ, ನೀವು ನನಗೆ ಏನುಮಾಡಲಿಕ್ಕೂ ಹೇಳಲಿಲ್ಲ. ಆಮೇಲೆ ಹೊತ್ತಾಯಿತು ಎಂದರೆ ನನ್ನಿಂದ ಮಾತಿಲ್ಲ" ಎಂದ.

ಅವನ ಮಾತನ್ನು ಕೇಳಿ ನಕ್ಕು ದ್ಯಾವಪ್ಪ ಹೇಳಿದ, "ನೀನು ಕೇವಲ ಎರಡುಸೇರು ಅಕ್ಕಿ ಅನ್ನಕ್ಕೆ ನೀರಿಡು. ನಾನು ಹೇಳದೆ ಅಕ್ಕಿ ಹಾಕಬೇಡ. ಮಾಡಿದ ಅಡುಗೆ ಹೋಟಲಿನಿಂದ ಬರುತ್ತದೆ. ನೀನು ಮಾಡಬೇಕಾದ್ದು ಕೇವಲ ಅನ್ನ."

ಅನೇಕಮಂದಿ ಹುಡುಗರು ಅಡುಗೆಮನೆಗೆ ಬಂದು ಹೋದರು. ಅಡುಗೆಯವನನ್ನು ವಿಚಾರಿಸಿದರು. ಇಂದಿನ ಊಟ ಏನೆಂಬುದು ಗೊತ್ತಾಗಲಿಲ್ಲ. ಇಷ್ಟರಲ್ಲಿ ಕ್ಷಾಮನಿವಾರಣಾ ಸಮಿತಿಯ ಕಾರ್ಯದರ್ಶಿಗಳು ಬಂದರು. ಅವರು ಬಂದ ತಕ್ಷಣ ವಾರ್ಡನ್‌ರವರ ಹತ್ತಿರ ಜನ ಹೋಯಿತು ; ಹಾಸ್ಟಲಿನ ಅಂಗಳದಲ್ಲಿ ಜಮಖಾನ ಹಾಸಿದರು. ಮೀಟಿಂಗ್ ನಡೆಯುತ್ತದೆ, ಎಲ್ಲರೂ ಬರಬೇಕೆಂದು ಜವಾನನು ರೂಮುಗಳಿಗೆ ಹೋಗಿ ಹುಡುಗರಿಗೆ ತಿಳಿಸಿ ಬಂದ. ವಾರ್ಡನ್‌ರವರು ಬರುತ್ತಲೇ ಅವರನ್ನು ಅಧ್ಯಕ್ಷರನ್ನಾಗಿ ಮಾಡಿ, ಕ್ಷಾಮನಿವಾರಣಾ ಸಮಿತಿಯ ಕಾರ್ಯದರ್ಶಿಗಳು ಕ್ಷಾಮದಿಂದ ಪೀಡಿತರಾದ ಜನರ ಸ್ಥಿತಿಗಳನ್ನು ವರ್ಣಿಸಿದರು. ತರುವಾಯ ದ್ಯಾವಪ್ಪ ಎದ್ದು ನಿಂತುಕೊಂಡು ಹೇಳಿದ :

"ಕ್ಷಾಮದ ವಿಚಾರ ನಮಗೆಲ್ಲ ತಿಳಿದಿದೆ; ಕಾರ್ಯದರ್ಶಿಗಳು ಅದರ ವರ್ಣನೆಯನ್ನು ನಿಮ್ಮ ಮುಂದೆ ಮಾಡಿರುವರು. ಆದ್ದರಿಂದ ಆ ವಿಚಾರದಲ್ಲಿ ತಿರುಗಿ ಹೆಚ್ಚಾಗಿ ಹೇಳುವ ಆವಶ್ಯಕತೆ ಇಲ್ಲ. ಈಗ ನಮ್ಮ ಮುಂದೆ ಇರುವುದು ಅದರ ನಿವಾರಣೋಪಾಯ. ನಾವೆಲ್ಲ ಹಳ್ಳಿಗಳಿಂದ ಬಂದವರು.

ರೈತರ ಮಕ್ಕಳು. ಆದ್ದರಿಂದ ಕ್ಷಾಮದ ವಿಚಾರ ನಮಗೆ ಚೆನ್ನಾಗಿ ತಿಳಿದಿರುವುದು. ಅದರ ನಿವಾರಣೆಗೆ ಒಂದೇ ಸಾಧನ; ಅದು ಹಣ. ನಮ್ಮ ಕಾರ್ಯದರ್ಶಿಗಳು ಕೇಳುತಿರುವುದೂ ಹಣ. ನಿನ್ನೆ ರಾತ್ರಿ ಅವರು ಬಂದು ತಿಳಿಸಿದಾಗ ಒಂದು ನೋಟೀಸನ್ನು ಎಲ್ಲರ ರೂಮಿಗೂ ಕಳುಹಿಸಿತ್ತು. ಕೇವಲ ಎರಡು ರೂಪಾಯಿ ವಸೂಲಾಯಿತು. ಇದು ಅತ್ಯಂತ ಶೋಚನೀಯವಾದ ಸಂಗತಿ. ನಿಮಗೆಲ್ಲರಿಗೂ ತಿಳಿದಂತೆ ಇಂದು ನಮ್ಮ ಹಾಸ್ಟಲಿನಲ್ಲಿ ಔತಣವಿದೆ. ಅದಕೋಸ್ಕರ ವಾರ್ಡನ್‌ರವರು ಮೂವತ್ತು ರೂಪಾಯಿ ಕೊಟ್ಟಿರುವರು. ನಮ್ಮ ಸಹೋದರ ಸಹೋದರಿಯರು ಹೊಟ್ಟೆಗೆ ಅನ್ನವಿಲ್ಲದೆ ಸಾಯುತ್ತಿರುವ ಕಾಲದಲ್ಲಿ ನಾವು ಔತಣ ಮಾಡಿಕೊಂಡು ಊಟಮಾಡುವುದಕ್ಕಿಂತಲೂ ಹೀನವಾದ ಕಾರ್ಯ ಇನ್ನೊಂದಿಲ್ಲ. ಆದ್ದರಿಂದ ಇದುವರೆಗೂ ಔತಣಕ್ಕೆ ವ್ಯವಸ್ಥೆ ಮಾಡದೆ ನಿಮ್ಮೆಲ್ಲರ ಅನುಮತಿಗಾಗಿ ಕಾದಿರುವೆನು. ಈ ಮೂವತ್ತು ರೂಪಾಯಿಗಳನ್ನು ಅವರಿಗೆ ಅರ್ಪಿಸೋಣ. ಕ್ಷಾಮದಿಂದ ನೊಂದ ಜನರ ಜ್ಞಾಪಕಕಾರ್ಥವಾಗಿ ಎಲ್ಲರೂ ಉಪವಾಸ ಮಾಡೋಣ. ಇವತ್ತಿನ ಅಕ್ಕಿ, ಬೇಳೆಯನ್ನೆಲ್ಲ ಕ್ಷಾಮನಿವಾರಣಾ ಸಮಿತಿಗೆ ಅರ್ಪಿಸೋಣ. ನಾವೆಲ್ಲ ಒಟ್ಟುಸೇರಿ ಮನೆ ಮನೆಗಳಿಗೆ ಹೋಗಿ ಸಾಧ್ಯವಾದಷ್ಟು ಹಣ ವಸೂಲು ಮಾಡೋಣ. ಹೀಗೆ ಇಂದಿನ ಹಬ್ಬವನ್ನೂ ರಜವನ್ನೂ ಆಚರಿಸೋಣವೆಂದು ನಾನು ನಿಮ್ಮಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ನಾವು ವಿದ್ಯಾರ್ಥಿಗಳು, ಇದಕ್ಕಿಂತ ಹೆಚ್ಚು ನಾವು ಮಾಡಲಾರೆವು. ಇವತ್ತಿನ ಒಂದು ದಿನವನ್ನು ಅದಕ್ಕೋಸ್ಕರ ವಿನಿಯೋಗಿಸಬಹುದು."

ದ್ಯಾವಪ್ಪನ ಭಾಷಣವನ್ನು ಕೇಳಿ ಹುಡುಗರು ಯೋಚನೆಗೆ ಪ್ರಾರಂಭಿಸಿದರು, ಸಭೆ-ನಿಶ್ಯಬ್ದವಾಗಿತ್ತು. ಒಂಭತ್ತನೆಯ ರೂಮಿನ ವಿದ್ಯಾರ್ಥಿ ಎದ್ದು ನಿಂತುಕೊಂಡ. ಹುಡುಗರೆಲ್ಲ ಅವನನ್ನೇ ನೋಡಲು ಪ್ರಾರಂಭಿಸಿದರು. ಅವನು ಹೇಳಿದ," ದ್ಯಾವಪ್ಪನವರ ಸಲಹೆ ಅತ್ಯಮೂಲ್ಯವಾದ್ದು. ಅವರ ಸಲಹೆಯನ್ನು ಒಪ್ಪುವುದು ಪ್ರತಿಯೊಬ್ಬರ ಪರಮ ಕರ್ತವ್ಯ. ನಾನು ಇವತ್ತು ಊಟಮಾಡುವುದಿಲ್ಲ, ಉಪವಾಸ ಮಾಡುವೆನು. ಇಂದು ಎಷ್ಟು ಸಾಧ್ಯವೋ ಅಷ್ಟು ಹಣವಸೂಲಿಗೆ ಹೊರಡುವೆನು."

ಇಪ್ಪತ್ನಾಲ್ಕನೆಯ ರೂಮಿನ ಹುಡುಗರೂ ಸಮರ್ಥನೆ ಮಾಡಿದರು.

ಮಲ್ಲೇಗೌಡ ಎದ್ದು ನಿಂತುಕೊಂಡ. ಅವನು ಎದ್ದಕೂಡಲೇ ಹುಡುಗರೆಲ್ಲ ಜೋರಾಗಿ ಚಪ್ಪಾಳೆ ಹೊಡೆದರು. ಆತನು ಎದ್ದು ನಿಂತಿದ್ದು 'ಮೂವತ್ತು ರೂಪಾಯಿ ಕ್ಷಾಮನಿವಾರಣಾ ಸಮಿತಿಗೆ ಕೊಡಲಿ. ಬರಿ ಹೊಟ್ಟೆಯಲ್ಲಿ ಹಣ ವಸೂಲಿಗೆ ಹೋಗುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಅನ್ನ, ಸಾರು ಹಾಸ್ಟಲಿನಲ್ಲಿ ಮಾಡಲಿ' ಎಂದು ಹೇಳುವುದಕ್ಕೆ. ಅವನು ಪೀಠಿಕೆ ಹೇಳುವುದಕ್ಕೆ ಹೋಗಿ ಅರ್ಧಗಂಟೆ ಮಾಡಿದ. ಹುಡುಗರಿಗೆ ಅವನ ಅಭಿಪ್ರಾಯ ಬೇಕಿತ್ತು, ಭಾಷಣವಲ್ಲ. ಆದ್ದರಿಂದ ಸ್ವಲ್ಪ ಗದ್ದಲ ವಾಯಿತು. ಇದನ್ನು ನೋಡಿ ಅವನು ಹೆದರಿ ಹಿಂದಿನ ಇಬ್ಬರಂತೆ ಒಪ್ಪಿಗೆ ಇತ್ತು ಕುಳಿತುಕೊಂಡ.

ಮಲ್ಲೇಗೌಡ ಕುಳಿತುಕೊಂಡುದನ್ನು ನೋಡಿ ಗೋವಿಂದೆಗೌಡನಿಗೆ ಆಶ್ಚರ್ಯವಾಯಿತು. ಒಬ್ಬರೂ ವಿರೋಧಮಾಡದಿರುವಾಗ ತಾನೊಬ್ಬನೇ ಏತಕ್ಕೆ ಅಪವಾದಕ್ಕೆ ಗುರಿಯಾಗಲಿ ಎಂದು ಆತನು ಸಮ್ಮತಿಕೊಟ್ಟನು.

ಹುಡುಗರ ಈ ತ್ಯಾಗವನ್ನು ನೋಡಿ ಕ್ಷಾಮನಿವಾರಣಾ ಸಮಿತಿಯ ಕಾರ್ಯದರ್ಶಿಗಳೂ ವಾರ್ಡನ್‌ರವರೂ ತುಂಬಾ ಸಂತೋಷಪಟ್ಟರು. ಇಷ್ಟಕ್ಕೆಲ್ಲ ಕಾರಣಕರ್ತನಾದ ದ್ಯಾವಪ್ಪನನ್ನು ಹೊಗಳಿದರು.

ದ್ಯಾವಪ್ಪ ಹುಡುಗರನ್ನು ಕರೆದುಕೊಂಡು ಹಣವಸೂಲಿಗೆ ಹೊರಟ. ಹುಡುಗರನ್ನು ತಂಡತಂಡಗಳಾಗಿ ಮಾಡಿ ಒಂದೊಂದು ಬೀದಿಯಲ್ಲಿ ಒಂದೊಂದು ಗುಂಪು ಹೋಗುವಂತೆ ಹೇಳಿದ. ಸಾಯಂಕಾಲದವರೆಗೂ ಹೀಗೆ ಸುತ್ತಾಡಿ ಹಣ ವಸೂಲು ಮಾಡಿದರು. ಹಾಸ್ಟಲಿಗೆ ಹಿಂದಿರುಗುವಾಗ ಎಲ್ಲರೂ ಹಸಿವು, ಆಯಾಸದಿಂದ ದಣಿದುಬಂದಿದ್ದರು. ಆದರೂ ಅವರ ಮುಖದ ಮೇಲೆ ಪ್ರಸನ್ನತೆ ಎದ್ದು ಕಾಣುತ್ತಿತ್ತು. ಹಾಸ್ಟಲಿನ ಒಳಗೆ ಕಾಲಿಡುತ್ತಲೇ ತನ್ನ ಸ್ನೇಹಿತನೊಬ್ಬನು ಕಾದಿರುವುದನ್ನು ದ್ಯಾವಪ್ಪ ನೋಡಿದ. ಸ್ನೇಹಿತ ಹೇಳಿದ, "ನಿನಗಾಗಿ ಕಾದು ಕಾದು ಸಾಕಾಯಿತು. ಹಾಸ್ಟಲಿನಲ್ಲಿ ಒಬ್ಬರೂ ಇರಲಿಲ್ಲ, ಆದ್ದರಿಂದ ಕಾದಿರುವೆನು."

"ಏನು ವಿಶೇಷ ?"

" ಜೋಗ, ಆಗುಂಬೆ ಕಡೆ ಟ್ರಿಪ್ ಹೊರಡುವುದು ನಾಳೆ ಎಂದು ನಿಶ್ಚಯವಾಯಿತು. ಆದ್ದರಿಂದ ನಿನಗೆ ತಿಳಿಸಲು ಬಂದೆ. ನಮ್ಮ ಸೆರ್ಕ್ಷ ವಿದ್ಯಾರ್ಥಿಗಳೆಲ್ಲ ಬರುವರು."

" ಈ ಸಾರಿ ಬರಲು ಸಾಧ್ಯವಿಲ್ಲ. ನನ್ನನ್ನು ಕ್ಷಮಿಸಿ."

" ಒಳ್ಳೆ ವ್ಯಕ್ತಿಕಣಯ್ಯ ನೀನು. ಇದುವರೆಗೂ ಮಲೆನಾಡಿನ ವರ್ಣನೆ ಮಾಡಿ ನಮಗೆಲ್ಲ ಬನ್ನಿ ಎಂದು ಹೇಳುತಿದ್ದೆ. ಈಗ ನಿಮ್ಮೂರಕಡೆ ಹೊರಟರೆ ನಾನು ಬರುವುದಿಲ್ಲ ಎಂದು ಹೇಳುತಿರುವೆ, ಇದೇ ನಿನ್ನ ಲಕ್ಷಣ."

ದ್ಯಾವಪ್ಪ ಮಾತಿನಲ್ಲಿ ಸಿಕ್ಕಿಬಿದ್ದಿದ್ದ. ಆದ್ದರಿಂದ ತಿರುಗಿ ಮಾತ ನಾಡದೆ ಒಪ್ಪಿಕೊಂಡ.

---

## ೧೨. ಕತ್ತಿಯ ಬಾಯಿಗೆ ಹುಲಿ,ಹುಲಿಯ ಬಾಯಿಗೆ ಮನುಷ್ಯ

ವಿದ್ಯಾರ್ಥಿಗಳ ಒಂದು ಗುಂಪು ಮಲೆನಾಡಿನಕಡೆ ಟ್ರಿಪ್ ಹೊರಟಿತು. ರೈಲುಗಾಡಿಯಲ್ಲಿ ಹುಡುಗರು ಬೇಕಾದಷ್ಟು ಅವಾಂತರ ಎಬ್ಬಿಸುತ್ತಿದ್ದರು ರೈಲುಗಾಡಿಯಲ್ಲಿದ್ದ ಇತರ ಪ್ರಯಾಣಿಕರಿಗೂ ಅವರಿಂದ ಆನಂದ. ಸಮಯ ಕಳೆಯುವುದು ಗೊತ್ತಾಗುತಿರಲಿಲ್ಲ.

ಹೀಗೆ ಆನಂದದಲ್ಲಿ ಟ್ರಿಪ್ಪಿನ ಪಾರ್ಟಿ ಪ್ರಯಾಣ ಮಾಡುತ್ತಿರುವಾಗ ಮಾತು ಬೆಳೆದು ರೈಲುಗಾಡಿ ನಿಲ್ಲಿಸುವಲ್ಲಿಗೆ ಬಂದು ನಿಂತಿತ್ತು. ರೈಲುಗಾಡಿ ನಿಲ್ಲಿಸುವುದೆಂದರೆ ಓಡುತಿರುವ ಗಾಡಿಯನ್ನು ಹಿಡಿದು ನಿಲ್ಲಿಸುವುದಲ್ಲ, ಗಾಡಿಯೊಳಗಿನಿಂದಲೇ ನಿಲ್ಲಿಸುವುದು.

ರೈಲುಬಂಡಿಯಲ್ಲಿ ಅಲಾರಂ ಸರಪಣಿ ಇರುವುದು. ಅದನ್ನು ಎಳೆದರೆ ಡ್ರೈವರು ಗಾಡಿ ನಿಲ್ಲಿಸುತ್ತಾನೆ. ಸರಪಣಿಯನ್ನು ಸುಮ್ಮನೆ ಎಳೆಯ ಬಾರದು. ಜನರಿಗೆ ಏನಾದರೂ ವಿಪತ್ತುಂಟಾದರೆ ಮಾತ್ರ ಎಳೆಯಬೇಕು.

ಸುಮ್ಮನೆ ಎಳೆದು ನಿಲ್ಲಿಸಿದರೆ ಐವತ್ತು ರೂಪಾಯಿ ದಂಡ ಕೊಡಬೇಕಾಗು ವುದು. ಸಾಧಾರಣವಾಗಿ ಚಿಕ್ಕ ಚಿಕ್ಕ ಕಡಮೆ ಬೆಲೆಯ ಪದಾರ್ಥಗಳು ಕೈ ತಪ್ಪಿ ಕೆಳಗೆ ಬಿದ್ದರೂ ಜನರು ಸರಪಣಿಯನ್ನು ಎಳೆದು ಗಾಡಿ ನಿಲ್ಲಿಸು ವುದಿಲ್ಲ. ಇನ್ನು ಸುಮ್ಮನೆ ರೈಲು ನಿಲ್ಲಿಸುವುದು ತುಂಟತನ. ಆದ್ದರಿಂದ ದ್ಯಾವಪ್ಪ ಹೇಳಿದ," ಇವೆಲ್ಲ ತುಂಟತನದ ಕೆಲಸ. ಇಂಥ ಕೆಲಸಗಳನ್ನು ನಾವು ನಿಲ್ಲಿಸಲು ಪ್ರಯತ್ನಪಡಬೇಕೆ ವಿನಾ ಪ್ರೋತ್ಸಾಹ ಕೊಡಬಾರದು."

ದ್ಯಾವಪ್ಪನ ಮಾತನ್ನು ಕೇಳಿ ಕೃಷ್ಣಮೂರ್ತಿ ನಕ್ಕು ಹೇಳಿದ, " ಈ ಜ್ಞಾನೋದಯ ದ್ಯಾವಪ್ಪನಿಗೆ ಎಂದಿನಿಂದಾಯಿತು ? "

ಶ್ರೀರಾಮುಲುನಾಯ್ಡು ಹೇಳಿದ : " ರೈಲು ನಿಲ್ಲಿಸಿದರೆ ದಂಡಕೊಡ ಬೇಕಾದ್ದರಿಂದ ಜ್ಞಾನೋದಯವಾಗಿದೆ. ರೈಲು ನಿಲ್ಲಿಸಿದರೆ ನಿನಗೆ ಹತ್ತು ರೂಪಾಯಿ ಕೊಡುತ್ತೇನೆ."

" ದಂಡ ಕೊಡುವುದು ಜ್ಞಾನೋದಯಕ್ಕೆ ; ದಂಡ ಕೊಡದೆ ಜ್ಞಾನೋದಯವಾದರೆ ಅದೇ ಪರಮ ಭಾಗ್ಯ" ಎಂದು ದ್ಯಾವಪ್ಪ ಹೇಳಿದ.

ಆ ಗಾಡಿಯಲ್ಲಿದ್ದ ಇತರ ಪ್ರಯಾಣಿಕರು ಅತ್ಯಂತ ಉತ್ಸಾಹದಿಂದ ಇವರ ಸಂಭಾಷಣೆಯನ್ನು ಕೇಳುತಿದ್ದರು. ಅವರಲ್ಲಿ ಒಬ್ಬರು ಹೇಳಿದರು, " ಅವರು ಹೇಳುವುದು ಸರಿ. ದಂಡ ಕೊಡದೆ ಜ್ಞಾನೋದಯವಾದರೆ ಅದೇ ಪರಮಭಾಗ್ಯ."

ಹೀಗೆ ಮಾತುಕಥೆ ನಡೆಯುತಿರುವಾಗ ದ್ಯಾವಪ್ಪ ಎದ್ದು ಸರಪಣಿ ಯನ್ನು ಎಳೆದ. ಇದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ರೈಲಿನ ಮೂಲೆ ಯಲ್ಲಿ ಒಬ್ಬ ಹೆಂಗಸು ಬಟ್ಟೆಗಳನ್ನೆಲ್ಲಾ ಕೊಡುವುತ್ತಾ ಮಗುವಿಗೆ ಹೊಡೆ ದಳು. ಆ ಮಗು ಜೋರಾಗಿ ಅಳಲು ಪ್ರಾರಂಭಿಸಿತು. ಇಷ್ಟರಲ್ಲಿ ಡ್ರೈವರು ಬ್ರೇಕ್ ಹಾಕಿದ. ಓಡುತ್ತಿದ್ದ ಗಾಡಿ ನಿಂತಿತು. ದ್ಯಾವಪ್ಪನನ್ನು ತಮಾಷೆ ಮಾಡುತ್ತಿದ್ದವರ ಮುಖದಬಣ್ಣ ಕುಂದಿಹೋಗಿತ್ತು. " ಗಾಡಿ ನಿಲ್ಲಿಸಿ ದವರುಯಾರು " ಎಂದು ಕೇಳುತ್ತಾ ಗಾರ್ಡು ಬಂದ.

ದ್ಯಾವಪ್ಪ ಸರಪಣಿಯನ್ನು ಎಳೆದು ಸುಮ್ಮನೆ ರೈಲು ನಿಲ್ಲಿಸಿರುವ ನೆಂದು ಒಂದು ಕಡೆ ಅವನ ಸ್ನೇಹಿತರಿಗೆಲ್ಲ ಕಳವಳ. ಇನ್ನೊಂದು ಮೂಲೆಯಲ್ಲಿ ಒಂದು ಮಗು ಜೋರಾಗಿ ಅಳುತಿದೆ. ಅದರ ತಂದೆತಾಯಿ

ರೈಲುಗಾಡಿಯನ್ನೆಲ್ಲ ಹುಡುಕುತಿದ್ದಾರೆ. ದ್ಯಾವಪ್ಪ ಅವರ ಹತ್ತಿರ ಹೋಗಿ, "ಮಗುವನ್ನು ಹೊಡೆಯಬೇಡಿ. ಅದರ ಕೈಗೆ ಕೊಟ್ಟಿದ್ದು ತಪ್ಪು. ಅದು ಕೆಳಗೆ ಬಿದ್ದಿದೆ. ನಾನೀಗ ತರುತ್ತೇನೆ'' ಎಂದು ಹೇಳಿ ರೈಲುಗಾಡಿಯಿಂದ ಇಳಿದ. ಗಾರ್ಡಿನೊಂದಿಗೆ ಅವನು ಮುಕ್ಕಾಲು ಫರ್ಲಾಂಗ್ ದೂರದವರೆಗೆ ಹುಡುಕುತ್ತಾ ಹೋದ. ಒಂದು ಕಡೆಯಲ್ಲಿ ಚಿನ್ನದಬಳೆ ಬಿದ್ದಿತ್ತು. ಅದನ್ನು ತಂದು ಆ ಮಗುವಿನ ತಂದೆತಾಯಿಗೆ ಕೊಟ್ಟ.

ಈ ಹುಡುಗರ ಮಾತುಕಥೆಯನ್ನು ಕೇಳುತ್ತಾ ಪ್ರಯಾಣಿಕರೆಲ್ಲ ಕುಳಿತಿದ್ದರು. ಎಲ್ಲರ ಗಮನವೂ ಇವರ ಮೇಲಿತ್ತು. ಕೈಯಲ್ಲಿ ಹಿಡಿದು ಕೊಂಡು ಆಡುತ್ತಿದ್ದ ಚಿನ್ನದ ಬಳೆ ಮಗುವಿನ ಕೈಯಿಂದ ಬಿತ್ತು. ದ್ಯಾವಪ್ಪ ಅದನ್ನು ಕಂಡ ತಕ್ಷಣ ಸರಪಣಿಯನ್ನು ಎಳೆದಿದ್ದ.

ಈಗ ಸರಪಣಿ ಎಳೆದ ಹಾಗೂ ಆಯಿತು, ಕೆಳಗೆ ಬಿದ್ದ ಬಂಗಾರದ ಬಳೆಯೂ ಸಿಕ್ಕಿತು. ಆದ್ದರಿಂದ ಬಂಗಾರದ ಬಳೆಯವರು ಹತ್ತುರೂಪಾಯಿ ಕೊಡಲು ಬಂದರು. ದ್ಯಾವಪ್ಪ ತೆಗೆದುಕೊಳ್ಳಲಿಲ್ಲ. ಗಾಡಿಯೊಳಗೆ ಕುಳಿತವರೆಲ್ಲ ಬಲವಂತ ಮಾಡಿದ ಮೇಲೆ ತೆಗೆದುಕೊಂಡ. ಸರಪಣಿ ಎಳೆ ಯಲು ಸ್ಪರ್ಧೆ ಕಟ್ಟಿದ ಶ್ರೀರಾಮುಲುನಾಯುಡು, ಸರಪಣಿ ಎಳೆದ ದ್ಯಾವಪ್ಪ ನಿಗೆ ಹತ್ತು ರೂಪಾಯಿ ಕೊಟ್ಟ. ಮುಂದಿನ ಸ್ಟೇಷನ್ನಿನಲ್ಲಿ ದ್ಯಾವಪ್ಪ ಇಪ್ಪತ್ತು ರೂಪಾಯಿಗೆ ತಿಂಡಿ ತಂದು ಗಾಡಿಯೊಳಗಿದ್ದವರಿಗೆಲ್ಲ ಹಂಚಿದ.

ತಿಂಡಿಯನ್ನು ತಿನ್ನುತ್ತಾ ವೃದ್ಧ ಪ್ರಯಾಣಿಕರೊಬ್ಬರು ಹೇಳಿದರು, "ರುಸ್ತುಂ ತಿಮ್ಮ ಸರಪಣಿಯನ್ನೂ ಎಳೆದು, ಕಳೆದು ಹೋದ ಸಾವಾನನ್ನೂ ತಂದುಕೊಟ್ಟು ಒಂದು ನಿಮಿಷದಲ್ಲಿ ಇಪ್ಪತ್ತು ರೂಪಾಯಿ ಸಂಪಾದಿಸಿ ನಮ್ಮ ಬಾಯಿ ಸಿಹಿ ಮಾಡಿದರು."

ದ್ಯಾವಪ್ಪ ಹೇಳಿದ, "ಇದಕ್ಕೆಲ್ಲ ಕಾರಣ ಆ ಮಗು."

"ದ್ಯಾವಪ್ಪನವರೆಂದರೆ ಕಡಮೆಯೇ! ಅವರೊಬ್ಬರು ನಮ್ಮ ಜೊತೆ ಯಲ್ಲಿದ್ದರೆ ಹತ್ತು ಜನರಿಪ್ಪ ಧೈರ್ಯ" ಕೆಂಚೇಗೌಡನೆಂದ.

ಕೆಂಚೇಗೌಡನನ್ನು ನೋಡಿ ದ್ಯಾವಪ್ಪ ಹೇಳಿದ, "ತಿಂಡಿಸಿಕ್ಕಿದ್ದ ರಿಂದ ಮುಖಸ್ತುತಿ. ಇಲ್ಲದಿದ್ದರೆ ಬೈಗುಳ.''

ಎಲ್ಲಾ ನಕ್ಕರು.

ರೈಲು ಭದ್ರಾವತಿ ತಲಪಿತು. ಕಬ್ಬಿಣದ ಕಾರ್ಖಾನೆ ನೋಡಲು ಇವರು ಅಲ್ಲಿ ಇಳಿದರು. ಅಲ್ಲಿಂದ ಗೇರುಸೊಪ್ಪ ಜಲಪಾತದ ಮೂಲಕ ಆಗುಂಬೆಗೆ ಸೂರ್ಯಾಸ್ತವನ್ನು ನೋಡಲು ಹೋದರು. ಹಿಂದಿರುಗುವಾಗ ಟ್ರಿಪ್ಪಿನ ಪಾರ್ಟಿ ಹೊನ್ನುಗದ್ದೆಗೆ ಬಂದಿಳಿಯಿತು.

ಮಲೆನಾಡಿನ ವರ್ಣನೆ ಕೇಳಿದ ದ್ಯಾವಪ್ಪನ ಸ್ನೇಹಿತರು ಅದನ್ನು ನೋಡಲು ಆಶೆಪಡುತ್ತಿದ್ದರು. ಅಲ್ಲಿಗೆ ಹೋದ ಮೇಲೆ ಅಲ್ಲಿಯ ಹೆಮ್ಮರ ಗುಡ್ಡ ಬೆಟ್ಟಗಳನ್ನು ನೋಡಿ ಆನಂದಪಡುವುದರ ಬದಲು ಭಯಪಟ್ಟರು.

ಹೊನ್ನುಗದ್ದೆಯಲ್ಲಿ ಇವರ ಮೊದಲನೆಯ ಕಾರ್ಯಕ್ರಮ ಷಿಕಾರಿ. ಪಟ್ಟಣದಿಂದ ಬೇಟೆಯಾಡಲು ಬಂದಿರುವರೆಂದು ಹಳ್ಳಿಯವರು ತಮ್ಮ ಕೆಲಸ ಕಾರ್ಯಗಳನ್ನು ಬಿಟ್ಟು ಷಿಕಾರಿಗೆ ಬಂದರು. ಷಿಕಾರಿಗಾರರು ಸೈನ್ಯದ ಚಿಕ್ಕ ಪಡೆಯಂತೆ ಕಂಡರು. ಅವರನ್ನೂ ಅವರ ಕೈಯಲ್ಲಿರುವ ಬಂದೂಕುಗಳನ್ನೂ ನೋಡಿ ಇವರ ಮೈ ರಕ್ತ ಬಿಸಿ ಏರಿತು. ಅತ್ಯಂತ ಉತ್ಸಾಹದಿಂದ ಷಿಕಾರಿಗೆ ಎಲ್ಲಾ ಹೊರಟರು. ಕೆಲವುಕಡೆ ಗುಡ್ಡ ಬೆಟ್ಟಗಳನ್ನು ಹತ್ತಿಳಿದರು, ಕೆಲವುಕಡೆ ಹಳ್ಳಕೊಳ್ಳಗಳನ್ನು ದಾಟಿದರು.

ಬೇಟೆ ಪ್ರಾರಂಭವಾಯಿತು. ಕೆಲವರು ಪ್ರಾಣಿಗಳು ಬರುವ ಸ್ಥಳಗಳಲ್ಲಿ ಫರ್ಲಾಂಗ್ ದೂರದಲ್ಲಿ ಕೋವಿಗಳನ್ನು ಹಿಡಿದುಕೊಂಡು 'ಬಿಲ್ಲಿ'ಗೆ ಕುಳಿತರು. 'ಬಿಲ್ಲಿ' ನವರ ಜೊತೆಯಲ್ಲಿ ಟ್ರಿಪ್ಪಿನವರು ಕುಳಿತುಕೊಂಡರು. ಕೆಲವು ಮಂದಿ ಕೂಗುತ್ತಾ ಮರಗಿಡಗಳನ್ನು ಬಡಿಯುತ್ತಾ ಬಂದರು. ಜೊತೆಯಲ್ಲಿ ನಾಯಿಗಳು ಬೊಗಳುತ್ತಿದ್ದವು. ಎಂಥ ಹೇಡಿಗೂ ಹುರುಪನ್ನು ಹುಟ್ಟಿಸುವ ಸನ್ನಿವೇಶ. ಈ ಮಧ್ಯೆ ಬಂದೂಕಿನ ಶಬ್ದಗಳು ಕೇಳಿಬಂದವು. ನಾಯಿ ಬೊಗಳುವುದು ಹೆಚ್ಚಿತು. ಜನರ ಕೂಗು ನೂರ್ಮಡಿಯಾಯಿತು. ಪ್ರತಿಯೊಬ್ಬ ಬಿಲ್ಲುಗಾರನೂ ಕೋವಿಯನ್ನು ಎದೆಯಮೇಲೆ ಏರಿಸಿಕೊಂಡು ಪ್ರಾಣಿ ಬರುವುದನ್ನೇ ಕಾದಿದ್ದರು. ಷಿಕಾರಿಯನ್ನು ನೋಡಲು ಹೋದ ಟ್ರಿಪ್ಪಿನವರಿಗೂ ಹುರುಪು ಹುಟ್ಟಿತು.

ಈ ಷಿಕಾರಿ ಮುಗಿಯಿತು. ಹಿಂದಿರುಗುವಾಗ ಹುಲಿ ಪಕ್ಕದ ಹಳ್ಳಿಯಲ್ಲಿ ಹಸುವನ್ನು ಹಿಡಿದಿದೆ ಎಂದು ಸಮಾಚಾರ ಬಂತು. ದನ ತಿನ್ನುವುದಕ್ಕೆ ರಾತ್ರಿ ಹುಲಿ ಬರುತ್ತದೆ. ಆಗ ಸುಲಭವಾಗಿ ಹುಲಿಯನ್ನು ಹೊಡೆಯ

ಬಹುದು ಎಂಬ ವಿಚಾರ ತಿಳಿದು ಎಲ್ಲರೂ ಹುಲಿ ಹೊಡೆಯಲು ಹೋಗ ಬೇಕೆಂದು ತವಕಪಟ್ಟರು. ಮಧ್ಯಾಹ್ನ ಏರುತ್ತಾ ಬಂದಹಾಗೆ ತವಕ ಇಳಿ ಮುಖವಾಯಿತು. ಟ್ರಿಪ್ಪಿನವರು ಬರುವರೆಂದು ಎತ್ತರವಾದ ಮರದ ಮೇಲೆ ಮಲಗಲು ಅನುಕೂಲವಾಗುವ ರೀತಿಯಲ್ಲಿ ಅಟ್ಟ ಕಟ್ಟಿದರು. ಅವ ರಲ್ಲಿ ಉತ್ಸಾಹ ಶಾಲಿಗಳಾದ ಮೂರುಮಂದಿ ಹುಲಿ ಶಿಕಾರಿಗೆ ಹೊರಟರು. ಸ್ನೇಹಿತರು ಉತ್ಸಾಹ ತುಂಬಿ ಅವರನ್ನು ಬೀಳ್ಕೊಟ್ಟರು. ಹುಲಿ ಹಸುವನ್ನು ಹಿಡಿದಿರುವ ಸ್ಥಳ ಮುಟ್ಟಿದರು. ಮರವನ್ನು ಹತ್ತಬೇಕಾಯಿತು. ಹಗ್ಗ ಕಟ್ಟಿ ಬಹು ಪ್ರಯಾಸದಿಂದ ಮರಹತ್ತಿಸಿದರು. ಅಟ್ಟದ ಮೇಲೆ ಆ ಮೂರು ಮಂದಿಯೂ ಕುಳಿತರು. ಅವರ ಜೊತೆಯಲ್ಲಿ ದ್ಯಾವಪ್ಪ ಮತ್ತು ಹುಲಿ ಹೊಡೆಯುವುದರಲ್ಲಿ ನಿಪುಣನೆನಿಸಿಕೊಂಡಿದ್ದ ಸಿದ್ದ ಇದ್ದರು. ಎಲ್ಲರೂ ಕುಳಿ ತರು. ಕಪ್ಪು ಕವಿಯಿತು. ಕೂತು ಬೇಸರವಾದ್ದರಿಂದ ಒಬ್ಬನು ಸಿಗರೇ ಟನ್ನು ತೆಗೆದ. ಸಿದ್ದ ಹೇಳಿದ, "ಸಿಗರೇಟು ಸೇದಬಾರದು, ಅದರ ವಾಸನೆಗೆ ಹುಲಿ ಬರುವುದಿಲ್ಲ. ಅದರ ಕಣ್ಣು ಬಹು ಸೂಕ್ಷ್ಮ. ದೂರದಿಂದಲೇ ಸಿಗರೇ ಟಿನ ಬೆಂಕಿಯನ್ನು ನೋಡುತ್ತದೆ."

ಜೋಲು ಮುಖ ಹಾಕಿಕೊಂಡು ಬೆಂಕಿಪೊಟ್ಟಣ, ಸಿಗರೇಟನ್ನು ಜೋಬಿಗೆ ಹಾಕಿಕೊಂಡ ಆತ.

ಸುಮ್ಮನೆ ಕುಳಿತು ಹುಲಿ ಬರುವ ದಾರಿ ಕಾಯ್ದು ಸಾಕಾಗಿ ಆಕಳಿ ಸಿದರು. ಕಾಫಿ ಕುಡಿದರು ; ಹುಲಿಯ ಸುಳಿವಿಲ್ಲ. ಒಬ್ಬ ನಿದ್ದೆ ಹೋದ, ಎರಡನೆಯವನು ಅದೇ ಹಾದಿ ಹಿಡಿದ. ಮೂರನೆಯವನು ಎಚ್ಚರವಾಗಿ ರಲು ಬಹಳ ಪ್ರಯತ್ನ ಪಟ್ಟ. ಆ ಪ್ರಯತ್ನದಲ್ಲಿಯೇ ನಿದ್ದೆ ಪ್ರಾರಂಭವಾ ಯಿತು. ನಿದ್ದೆ ಹೋಗುವಾಗ ಹೇಳಿದ, " ಹುಲಿ ಬಂದಾಗ ಗುಂಡು ಹೊಡೆ ಯುವ ಮುಂಚೆ ಏಳಿಸಿ."

ಸಿದ್ದ ಮತ್ತು ದ್ಯಾವಪ್ಪ ಎಚ್ಚರವಾಗಿ ಕುಳಿತಿದ್ದರು. ಅವರ ಗಮನ ಹಸು ಹಿಡಿದುಹಾಕಿದ ಸ್ಥಳದಕಡೆಗಿತ್ತು, ರಾತ್ರಿ ಒಂದು ಗಂಟೆಯಾಗಿರ ಬಹುದು, ಶಬ್ದ ಕೇಳಿದ ಹಾಗಾಯಿತು. ಸಿದ್ದ ಕೋವಿ ಸರಿಮಾಡಿಕೊಂಡ. ಶಬ್ದ ಕೇಳಿಸುವುದು ನಿಂತಿತು. ಇಬ್ಬರೂ ಆ ಕಡೆ ನೋಡುತಿದ್ದರು. ಹತ್ತು ನಿಮಿಷವಾಗಿರಬಹುದು. ಹಸುವಿನ ಹತ್ತಿರ ಮರಗಳ ಮಧ್ಯೆ ಬೆಳದಿಂಗಳ

ಹಾಗೆ ಬೆಳ್ಳಗೆ ಕಾಣಬಂತು. ಮರಗಳ ಮಧ್ಯೆ ಹೀಗೆ ಕಾಣುವುದು ಬೆಳ ದಿಂಗಳೋ ಅಥವಾ ಹುಲಿಯು ಎದೆಯೋ ಅವರಿಗೆ ಗೊತ್ತಾಗಲಿಲ್ಲ. ಬಹಳ ಹೊತ್ತು ನೋಡಿದರು. ಮನುಷ್ಯರು ಬಂದ ವಿಚಾರ ಹುಲಿಗೆ ಗೊತ್ತಾಗಿತ್ತು. ಬೆಕ್ಕು ಕುಳಿತುಕೊಳ್ಳುವ ಹಾಗೆ ಹುಲಿ ಬಂದು ಕುಳಿತಿತ್ತು, ಎದೆ ಬೆಳ್ಳಗೆ ಕಾಣಿಸುತ್ತಿತ್ತು. ಬಹಳ ಹೊತ್ತಿನ ಮೇಲೆ ಹುಲಿ ಎಂದು ದೃಢಮಾಡಿ ಕೊಂಡರು. ಒಂದು ಬಿದಿರಮೆಳೆ ಅಡ್ಡ ಆದುದರಿಂದ ಗುಂಡು ಬಡಿಯು ವುದಕ್ಕಿಂತಲೂ ತಪ್ಪಿಹೋಗುವ ಸಂಭವ ಹೆಚ್ಚು. ಸರಿಯಾಗಿ ಗುರಿ ಹಿಡಿದು ಸಿದ್ದ ಗುಂಡು ಹೊಡೆದ. ಗುಂಡಿನ ಶಬ್ದದೊಡನೆ ಹುಲಿ ಆರ್ಭ ಟಿಸಿ ನೆಗೆಯಿತು. ಗುಂಡಿನಶಬ್ದ, ಹುಲಿಯು ಆರ್ಭಟದಿಂದ ಮಲಗಿದ್ದ ಮೂರು ಮಂದಿಗೆ ಎಚ್ಚರವಾಯಿತು. ಏನಾಯಿತು ಎಂದು ವಿಚಾರಿಸ ತೊಡ ಗಿದರು. ಆಗ ಮಾತನಾಡಬಾರದೆಂದು ತಿಳಿಸಿದರು. ಹುಲಿ ಸತ್ತುಬಿದ್ದಿ ದೆಯೋ ಗಾಯಗೊಂಡು ಹೋಯಿತೋ ಒಂದೂ ಗೊತ್ತಾಗಲಿಲ್ಲ. ಮರದ ಮೇಲಿದ್ದು ಬಹಳ ಹೊತ್ತು ನೋಡಿದರು. ಗೊತ್ತಾಗಲಿಲ್ಲ. ಇಂಥ ಸ್ಥಿತಿ ಯಲ್ಲಿ ಮರ ಇಳಿದು ಮನೆಗೆ ಹೋಗುವುದು ಅಪಾಯವೆಂದು ಅಲ್ಲಿಯೇ ಮಲಗಿ ಬೆಳಗುಮಾಡಿದರು.

ಹಚ್ಚಗೆ ಬೆಳಕು ಹರಿದ ಮೇಲೆ ಮರದಿಂದ ಇಳಿದರು. ಟ್ರಿಪ್ಪಿನ ಮೂರು ಮಂದಿಗೆ ತುಂಬಾ ಭಯ; ನಾವು ಏತಕ್ಕೆ ಬಂದೆವು ಎನಿಸಿತು. ಹುಲಿ ಹೊಡೆದ ಸ್ಥಳ ನೋಡಿದರು. ರಕ್ತ ಚೆಲ್ಲಾಡಿಹೋಗಿದೆ. ಮೈ ರೋಮ ಬಿದ್ದಿವೆ. ಹುಲಿಗೆ ಗುಂಡು ಬಿದ್ದಿದೆ ಎಂದು ನಿಶ್ಚಯವಾಯಿತು. ಆ ದೃಶ್ಯ ನೋಡಿ ಅವರ ಎದೆ ಝುಲ್ಲೆಂತು. ಆ ಹಳುವಿನಲ್ಲಿ ಎಲ್ಲಿ ಹುಲಿ ಅವಿತುಕೊಂಡಿದೆಯೋ ಎಂಬ ಭಯ. ಇದು ಸೇರಿ ನಾನು ಐದು ಹುಲಿ ಕೊಂದೆನಲ್ಲ ಎಂದು ಸಿದ್ದನಿಗೆ ಆನಂದ. ತಾನು ಹಿಂದೆ ಹುಲಿ ಹೊಡೆದ ಕಥೆಯನ್ನು ವರ್ಣಿಸುತ್ತಿದ್ದ. ನಮ್ಮ ಟ್ರಿಪ್ಪಿನವರಿಗೆ ಇವೊಂದೂ ಬೇಡ. ಹೇಗಾದರೂ ಮನೆ ತಲಪಿದರೆ ಸಾಕು ಎಂದಾಗಿತ್ತು. ಮುಂದೆ ಸಿದ್ದ, ಮಧ್ಯೆ ಟ್ರಿಪ್ಪಿನವರು, ಹಿಂದೆ ದ್ಯಾವಪ್ಪ. ಹಾಗೂ ಹೀಗೂ ಕಾಡಿನಿಂದ ಬಯಲು ಬಿದ್ದರು. ಹೊನ್ನು ಗದ್ದೆಗೆ ಬಂದಮೇಲೆ ಗಾಯಗೊಂಡ ಹುಲಿ ಹುಡು ಕಲು ಜನ, ನಾಯಿ ಸೇರಿಸಿಕೊಂಡು ಸಿದ್ದ ಹೊರಟ. ಊರಿನವರೂ

ಅತ್ಯಂತ ಆನಂದದಿಂದ ಹುಡುಕಲು ಹೊರಟರು. ನಮ್ಮ ಟ್ರಿಪ್ಪಿನವರಿಗೆ ಭಯ. ಇವರು ಏಕೆ ಹುಡುಕಲು ಹೋಗುತ್ತಾರೆ ಎಂದುಕೊಂಡರು.

ಹುಲಿ ಏಟು ತಿಂದುಹೋದ ದಾರಿಯಲ್ಲಿ ಇವರು ನಾಯಿಗಳನ್ನು ಮುಂದೆ ಬಿಟ್ಟು ಹುಡುಕುತ್ತಾ ಹೋದರು. ಮರಗಳಮೇಲೆ ಕೋತಿಗಳನ್ನು ನೋಡಿ ನಾಯಿ ಬೊಗುಳುತ್ತಾ ಮರ ಸುತ್ತುತಿದ್ದವು. ಏಟುತಿಂದ ಹುಲಿ ಐವತ್ತುಮೂರು ಹೋಗಿ ತಿರುಗಿ ಹಿಂದಕ್ಕೆ ಬಂದು ಒಂದು ಪೊದೆಯಲ್ಲಿ ಹುದುಗಿತ್ತು. ಮನುಷ್ಯರು ಕೂಗುತ್ತಾ ಹಳುವಿನಲ್ಲಿ ಹುಡುಕುತ್ತಿದ್ದರು. ಸಿದ್ದ ಉತ್ಸಾಹದಿಂದ ಮುಂದೆ ನುಗ್ಗುತಿದ್ದ. ಪೊದೆಯಲ್ಲಿ ಹುದುಗಿದ್ದ ಹುಲಿ ನೋವಿನಿಂದ ರೇಗಿತ್ತು. ನಾಯಿ, ಮನುಷ್ಯರ ಗಲಾಟೆಯಿಂದ ಗಾರಾಯಿತು. ಓಡಲು ಶಕ್ತಿಯಿಲ್ಲ, ಜನರ ಹಾವಳಿ ಹತ್ತಿರ ಬರುತ್ತಿದೆ. ಸಿದ್ದ ಕತ್ತಿಯಿಂದ ಹಳುವನ್ನು ಕಡಿದು ದಾರಿಮಾಡಿ ಕೊಳ್ಳುತ್ತಾ ನುಗ್ಗುತ್ತಿದ್ದ. ಅವನು ಹತ್ತಿರ ಬಂದಕೂಡಲೇ ಹುಲಿ ಅವನ ಮೇಲೆ ಹಾರಿತು. ಸಿದ್ದ ತನ್ನ ಕೈಯಲ್ಲಿದ್ದ ಕತ್ತಿಯನ್ನು ಬೀಸಿದ, ಕತ್ತಿ ಅದರ ಹೊಟ್ಟೆಯನ್ನು ಸೀಳಿತು.



ಸಿದ್ದ ಮತ್ತು ಹುಲಿಯ ಕುಸ್ತಿ

ಸಿದ್ದನ ಕತ್ತಿ ಹುಲಿಯಹೊಟ್ಟೆಗೆ ತಗುಲುವುದಕ್ಕೂ ಹುಲಿ ಇವನನ್ನು ಪರಚುವುದಕ್ಕೂ ಸರಿಯಾಯಿತ. ಹುಲಿ ಆಕಡೆ ಬಿತ್ತು, ಸಿದ್ದ ಈಕಡೆ ಬಿದ್ದ.

ಹುಲಿಯನ್ನೂ ಸಿದ್ದನನ್ನೂ ಊರಿಗೆ ತಂದರು. ಹುಲಿ ಮೊದಲೇ ಸತ್ತಿತ್ತು, ಮನೆ ತಲುಪಿದ ಒಂದು ಗಂಟೆಯೊಳಗೆ ಸಿದ್ದ ತೀರಿಕೊಂಡ. ಈ ಭಯಂಕರ ದೃಶ್ಯ ನೋಡಿದ ಟ್ರಿಪ್ಪಿನವರ ಕೈಕಾಲುಗಳಲ್ಲಿ ನಡುಕ ಹುಟ್ಟಿತು. ಒಬ್ಬನು ತಡೆಯಲಾರದೆ ದ್ಯಾವಪ್ಪನನ್ನು,“ ಶಿಕಾರಿ ಇಷ್ಟು ಭಯಂಕರವಾಗಿದ್ದರೂ ಜನರು ಏಕೆ ಶಿಕಾರಿಗೆ ಹೋಗುತ್ತಾರೆ ? ಗಾಯದ ಹುಲಿಯನ್ನು ಹುಡುಕಲು ಏಕೆ ಅವರಿಗೆ ಅವಕಾಶ ಕೊಡುತ್ತೀರಿ ?”

ಎಷ್ಟು ಉದ್ವೇಗ, ಭಯದಿಂದ ಆತನು ಕೇಳಿದ್ದನೋ ಅದರಕಡೆ ದ್ಯಾವಪ್ಪನ ಗಮನ ಇರಲಿಲ್ಲ. ಸಾಧಾರಣ ರೀತಿಯಲ್ಲಿ ಹೇಳಿದ,“ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನೂರಾರುಜನ ಮೋಟಾರು ಮುಂತಾದುವುಗಳ ಅಪಘಾತಕ್ಕೆ ಸಿಕ್ಕಿ ಸಾಯುತ್ತಾರೆ. ಮೋಟಾರು, ವಿಮಾನಗಳಲ್ಲಿ ಹೋಗುವುದು ಅಪಾಯ. ಆದರೂ ಜನರು ಅವುಗಳಲ್ಲಿ ಸಂಚಾರ ಮಾಡಲು ಕಾತುರರಾಗಿರುತ್ತಾರೆ. ರಸ್ತೆಯಮೇಲೆ ಹೋಗುವವರೂ ಸಹ ಮೋಟಾರು ಇತ್ಯಾದಿಗಳಿಂದ ಸಾಯುತ್ತಾರೆ. ಯಾರೂ ಸಾವಿನ ಹೆದರಿಕೆಯಿಂದ ಮನೆಯಲ್ಲಿ ಕುಳಿತಿರುವುದಿಲ್ಲ. ಶಿಕಾರಿ ಅವುಗಳಿಗಿಂತಲೂ ಭಯಂಕರ ವಾದುದಲ್ಲ.’’

---

## ೧೩. ಇತರರ ಸುಖಕ್ಕೆ ಜೀವಿಸುವುದು ತನ್ನ ಸುಖಕ್ಕೆ ಕಾರಣ

ಮಾರ್ಗಶಿರ ಮಾಸ. ಕೆಲವುಕಡೆ ಅಡಕೆ ಕೊಯ್ಲು ಮುಗಿದಿತ್ತು. ಇನ್ನು ಕೆಲವುಕಡೆ ಮುಗಿಯುತ್ತಾ ಬಂದಿತ್ತು. ರೈತರು ಗದ್ದೆಕೊಯ್ಲಿಗೆ

ಜನರನ್ನು ಹುಡುಕುತ್ತಿದ್ದರು. ಹೊನ್ನುಗದ್ದೆಯಲ್ಲಿ ಅಡಕೆ ಕೊಯ್ಲು ಮುಗಿದಿರಲಿಲ್ಲ. ಬೇಗ ಮುಗಿಸಬೇಕೆಂದು ರಾತ್ರಿ ಹಗಲು ಅಡಕೆ ಸುಲಿಯುವುದು, ಬೇಯಿಸುವುದು, ಒಣಗಿಸುವುದು ಇದರಲ್ಲಿ ನಿರತರಾಗಿದ್ದರು.

'ಬೀಟಿ'ಗೆ ಬಂದ ಪೋಲೀಸಿನವನೊಬ್ಬನು ಹುಲಿಯ ಕೈಯಲ್ಲಿ ಸತ್ತ ಸಿದ್ದನಮನೆಗೆ ಬಂದ. ಪೋಲಿಸಿನವನು ಎಂದೂ ಅವನ ಮನೆಗೆ ಬಂದಿರಲಿಲ್ಲ. ಈಗ ಅವನು ಸತ್ತ ಹತ್ತನೆಯ ದಿನಕ್ಕೆ ಬಂದಿಳಿದ. ಸಿದ್ದನ ಹೆಂಡತಿ ದುಃಖದಲ್ಲಿದ್ದಳು. ಪೋಲೀಸಿನವನು ಅವಳನ್ನೇ ಸಿದ್ದನ ಮರಣವನ್ನು ವಿಚಾರಿಸಿದ. ಆ ಬಡವಿ ವಿಚಾರವನ್ನು ಸಂಕ್ಷೇಪದಲ್ಲಿ ತಿಳಿಸಿ ಹೇಳಿದಳು," ದ್ಯಾವಪ್ಪನವರೂ ಅವರೂ ರಾತ್ರಿ ಹುಲಿ ಹೊಡೆಯಲು ಹೋಗಿದ್ದರಂತೆ. ರಾತ್ರಿ ಹೊಡೆದು ಬಂದರು, ಅದು ಸತ್ತಿರಲಿಲ್ಲ; ಹುಡುಕಲು ಬೆಳಗ್ಗೆ ಹೋದಾಗ ಅದು ಮೇಲೆ ಬಿದ್ದು ಹೀಗೆ ನನ್ನನ್ನು ಅನಾಥೆಯನ್ನಾಗಿ ಮಾಡಿತು."

ಪೋಲಿಸಿನವನು ಸುತ್ತಲೂ ನೋಡಿದ. ಆಕೆಯ ಐದು ವರ್ಷದ ಮಗ ಆಡುತ್ತಿದ್ದ. ಬೀಡಿ ಹತ್ತಿಸುತ್ತಾ ಹೇಳಿದ," ಹುಲಿ ಹೊಡೆದವರ ಮೇಲೆ ಏಕೆ ಬೀಳಬೇಕು? ಗಾಯದ ಹುಲಿ ಹುಡುಕಲು ಹೋದಾಗ ದ್ಯಾವಪ್ಪನವರು ಸಿದ್ದನ ಜೊತೆಯಲ್ಲಿ ಇದ್ದರೆ?"

"ಅದೆಲ್ಲ ನನಗೆ ಗೊತ್ತಿಲ್ಲ. ಹೊನ್ನು ಗದ್ದೆಗೆ ಹೋದರೆ ಗೊತ್ತಾಗುತ್ತದೆ."

ಬೀಡಿಯ ಬೂದಿಯನ್ನು ನೆಲಕ್ಕೆ ತಿಕ್ಕುತ್ತಾ ಪೋಲೀಸಿನವನು ತಿರುಗಿ ಕೇಳಿದ," ಹೊನ್ನುಗದ್ದೆಯವರಿಗೂ ನಿಮಗೂ ಏನಾದರೂ ದ್ವೇಷವಿದೆಯೋ?"

ಯಾರೂ ಯೋಚಿಸದ ಪ್ರಶ್ನೆಯನ್ನು ಪೋಲೀಸಿನವನು ಕೇಳಿದ. ಆ ಬಡವಳು ಏನು ಹೇಳಬೇಕು? ಗಂಡನನ್ನು ಕಳೆದುಕೊಂಡ ದುಃಖ ಬೇರೆ. ಕಣ್ಣುಗಳನ್ನು ಒರಸುತ್ತಾ ಹೇಳಿದಳು," ಅವರ ಅನ್ನವನ್ನೇ ತಿಂದು ನಾವು ಜೀವಿಸಿರುವುದು. ನಮ್ಮಂಥವರ ಮೇಲೆ ಅವರು ಏಕೆ ದ್ವೇಷ ಇಡುತ್ತಾರೆ?"

ನೆರೆಹೊರೆಯಲ್ಲಿಯೂ ಪೋಲೀಸಿನವನು ಸಿದ್ದ ಸತ್ತ ಕಾರಣವನ್ನು ವಿಚಾರಿಸಿದ. ಅವನು ಆಕಡೆ ಹೋದ ತರುವಾಯ ಈಕಡೆ ಹೊನ್ನು ಗದ್ದೆಗೆ ಸಮಾಚಾರ ಬಂತು. ತಮ್ಮಯ್ಯಗೌಡರು ಜಗುಲಿಯ ಮೇಲೆ ಕುಳಿತಿದ್ದರು. ಕೆಲಸದವರು ಅಡಕೆ ಸುಲಿಯುತ್ತಿದ್ದರು. ಬೇಗ ಅಡಕೆ ಕೊಯ್ಲನ್ನು ಮುಗಿಸುವ ವಿಚಾರದಲ್ಲಿ ಮಾತುಕಥೆ ನಡೆಯುತ್ತಿತ್ತು. ಪೋಲೀಸಿನವನು ಸಿದ್ದನಮನೆಗೆ ಬಂದುಹೋದ ವಿಚಾರ ತಿಳಿದ ತಕ್ಷಣ ತಮ್ಮಯ್ಯಗೌಡರಿಗೆ ನಡುಕ ಹುಟ್ಟಿತು. ತಮ್ಮ ಆಪ್ತರಲ್ಲಿಗೆ ರಾತ್ರಿಯೇ ಜನ ಹೋಯಿತು. ಹೊನ್ನುಗದ್ದೆಯಲ್ಲಿ ರಾತ್ರಿ ಯಾರೂ ನಿದ್ದೆ ಹೋಗ ಲಿಲ್ಲ. ಈ ಘೋರ ವಾರ್ತೆಯನ್ನು ಕೇಳಿ ಆಪ್ತಮಿತ್ರರು ರಾತ್ರಿಯೇ ಬಂದರು. ರಾತ್ರಿ ಎಲ್ಲಾ ಮಾತುಕಥೆ ನಡೆಯಿತು. ಸಿದ್ದನ ಜೊತೆಯಲ್ಲಿ ದ್ಯಾವಪ್ಪ ಹೋಗಿದ್ದ. ಪೋಲೀಸಿನವನು ದ್ಯಾವಪ್ಪನನ್ನೇ ಕೇಳಿದ. ವಿದ್ಯ ಮಾನಗಳು ಸರಿಯಾಗಿ ಗೊತ್ತಾಗುವವರೆಗೂ ದ್ಯಾವಪ್ಪನನ್ನು ಎಲ್ಲಿ ಯಾದರೂ ಬಚ್ಚಿಡಬೇಕೆಂದು ನಿಶ್ಚಯವಾಯಿತು.

ಕಾಗದ ಬರೆದರೆ ತಲಪುವುದು ತಡ. ಇಂಥ ವಿಚಾರವನ್ನು ಬರೆಯು ವುದೂ ಹಿತವಲ್ಲ. ದ್ಯಾವಪ್ಪ ಬೇರೆಯವರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳುವನೋ ಇಲ್ಲವೋ. ತಮ್ಮಯ್ಯಗೌಡರೆ ಬೆಂಗಳೂರಿಗೆ ಹೋಗಿ ಯಾರೂ ಕಾಣದ ಸ್ಥಳಕ್ಕೆ ಅವನನ್ನು ಕಳುಹಿಸಬೇಕೆಂದು ತೀರ್ಮಾನ ವಾಯಿತು. ಅದೇ ಪ್ರಾತಃಕಾಲ ತಮ್ಮಯ್ಯಗೌಡರು ಬೆಂಗೂಳೂರಿಗೆ ಪ್ರಯಾಣ ಬೆಳೆಸಿದರು.

ತಮ್ಮಯ್ಯಗೌಡರು ಹಾಸ್ಟಲಿಗೆ ಬಂದಾಗ ದ್ಯಾವಪ್ಪನ ರೂಮಿನಲ್ಲಿ ಪರೀಕ್ಷೆಯ ವಿಚಾರ ಚರ್ಚೆ ನಡೆಯುತ್ತಿತ್ತು. ಅಕಸ್ಮಾತ್ತಾಗಿ ಅಣ್ಣನನ್ನು ನೋಡಿ ದ್ಯಾವಪ್ಪನಿಗೆ ಆಶ್ಚರ್ಯವಾಯಿತು. ಒಂದುಸಾರಿಯೂ ಅವರು ಬೆಂಗಳೂರಿಗೆ ಬಂದವರಲ್ಲ. ಹೀಗೆ ಅಕಸ್ಮಾತ್ತಾಗಿ ಬಂದಿಳಿದಿದ್ದರಿಂದ ಕುತೂ ಹಲ ಹುಟ್ಟಿತು. ರೂಮಿನ ಕಿಟಿಕಿ ಬಾಗಿಲುಗಳನ್ನೆಲ್ಲಾ ಮುಚ್ಚಿಸಿ, ವಿದ್ಯ ಮಾನಗಳನ್ನು ತಿಳಿಸಿ ತಮ್ಮಯ್ಯಗೌಡರು ಹೇಳಿದರು, “ ನಿಜವಾದ ಸಂಗತಿ ಗೊತ್ತಾಗುವವರೆಗೆ ನೀನು ಎಲ್ಲಿಯಾದರೂ ತಲೆಮರಸಿಕೊಂಡಿರು.”

ದ್ಯಾವಪ್ಪನಿಗೆ ನಗು ಬಂತು. ನಗುವಷ್ಟು ವಿಚಾರ ಹಗುರವಾಗಿರ ಲಿಲ್ಲ, ಯೋಚಿಸುವುದಕ್ಕೆ ಅವಕಾಶವೂ ಇಲ್ಲ. ಅಣ್ಣ ಬಲವಂತ ಮಾಡು ತ್ತಿದ್ದರು.

ನೆಟ್ಟಗೆ ರೈಲ್ವೇಸ್ಟೇಷನ್ನಿಗೆ ಹೋದ. ಮದ್ರಾಸಿಗೆ ಹೋಗುವ ಗಾಡಿ ನಿಂತಿತ್ತು. ಅದರಲ್ಲಿ ಕುಳಿತುಕೊಂಡ. ಮದ್ರಾಸಿನಲ್ಲಿ ಒಂದು ವಾರವಿದ್ದ. ಒಂದೇಕಡೆ ಸುಮ್ಮನಿರುವುದು ಬೇಸರಿಕೆ. ಈ ನೆಪದಲ್ಲಿ ದೇಶವನ್ನಾದರೂ ಸುತ್ತಿಬರೋಣ. ಹಿಡಿದ ಪಾಪವಾದರೂ ತೊಲಗಿಹೋಗಲಿ ಎಂದು ಬೊಂಬಾಯಿಗೆ ಹೊರಟ. ಆ ವರ್ಷ ಕಾಂಗ್ರೆಸ್ ಅಧಿವೇಶನ ಲಾಹೋರಿ ನಲ್ಲಿ. ಕಾಗ್ರೆಂಸ್ಸಿನ ಅಧಿವೇಶನಕ್ಕೆ ಹೋಗುವ ಗಲಾಟೆಯಲ್ಲಿ ಬೊಂಬಾಯಿನ ನಾಗರಿಕರಿದ್ದರು. ಅವರನ್ನು ನೋಡಿ ತಾನೂ ಹೋಗಬೇಕೆಂಬ ಆಶೆ ಹುಟ್ಟಿತು. ಅಲ್ಲಿಂದ ಹಿಮಾಲಯಾ ಪರ್ವತಕ್ಕೂ ಹೋಗಿಬರಬೇಕೆಂದು ನಿಶ್ಚಯಿಸಿದ. ಬೊಂಬಾಯಿಂದ ಅಹಮದಾಬಾದು, ಅಲಹಾಬಾದು, ಕಾಶಿ ಇತ್ಯಾದಿ ಸ್ಥಳಗಳನ್ನು ಸುತ್ತಿ ಕಾಂಗ್ರೆಸ್ ಅಧಿವೇಶನ ಸೇರುವ ಸಮ ಯಕ್ಕೆ ಸರಿಯಾಗಿ ಲಾಹೋರನ್ನು ತಲಪಿದ. ಸ್ವಯಂ ಸೇವಕರಾಗಿ, ಪ್ರತಿನಿಧಿಗಳಾಗಿ ಹೋಗುವವರಿಗೆ ಕಾಂಗ್ರೆಸ್ ಅಧಿವೇಶನದ ಸೌಕರ್ಯ ಹೆಚ್ಚು. ಪ್ರೇಕ್ಷಕರಾಗಿ ಹೋಗುವವರಿಗೆ ಹಣ ಖರ್ಚು ವಿನಾ ಇನ್ನೇನೂ ಅನುಕೂಲವಿಲ್ಲ.

ಪ್ರೇಕ್ಷಕನಾಗಿ ಕಾಂಗ್ರೆಸ್ ಅಧಿವೇಶನ ನೋಡಲು ದ್ಯಾವಪ್ಪ ಹೋಗಿದ್ದ. ಅಲ್ಲಿಗೆ ಹೋದಮೇಲೆ ಅಧಿವೇಶನ ನೋಡುವುದರ ತೊಂದರೆ ತಿಳಿಯಿತು. ಮೊದಲನೆಯ ದಿನ ಕಾಂಗ್ರೆಸ್ ಮಂಟಪಗಳನ್ನು ಸುತ್ತುವುದ ರಲ್ಲಿ ಕಳೆದುಹೋಯಿತು.

ರಾಷ್ಟ್ರೀಯ ಕಾಂಗ್ರೆಸ್ ಎಂದರೆ ಹಿಂದೂಸ್ಥಾನದ ಸರ್ವ ಪ್ರಾಂತಗಳ ಸಮ್ಮೇಳನ. ತರತರದ ಜನ, ತರತರದ ಉಡುಪು ಇವುಗಳನ್ನು ಅಲ್ಲಿ ನೋಡಬಹುದು. ಅವರನ್ನು ನೋಡಲು ದ್ಯಾವಪ್ಪನಿಗೆ ಆನಂದ. ಜನರ ಭಾಷೆಯೂ ಬೇರೆ. ಉಡುಪು, ಭಾಷೆಯಿಂದ ಜನರ ಪ್ರಾಂತಗಳನ್ನು ಸುಲಭವಾಗಿ ಕಂಡುಹಿಡಿಯಬಹುದು. ಕಾಂಗ್ರೆಸ್ಸಿಗೆ ಸೇರಿದವರೆಲ್ಲ ಸಾಧಾರಣವಾಗಿ ಒಂದೇ ತರಹ ಉಡುಪನ್ನು ಧರಿಸುವುದರಿಂದ ಉಡುಪಿ

ನಿಂದ ಅವರ ಪ್ರಾಂತಗಳನ್ನು ತಿಳಿಯುವುದು ಕಷ್ಟ. ಮಾತನಾಡುವಾಗ ಸುಲಭವಾಗಿ ಕಂಡುಹಿಡಿಯಬಹುದು.

ಉತ್ತರ ಹಿಂದೂಸ್ಥಾನದ ಜನರು ತಮ್ಮ ಪ್ರಾಂತದ ಭಾಷೆಯಲ್ಲಿ ಮಾತನಾಡುತಿದ್ದರು, ಬಂಗಾಳಿಗಳು ಪಂಜಾಬಿನವರೊಂದಿಗಾಗಲಿ, ಪಂಜಾಬಿನವರು ಬಿಹಾರಿನವರೊಂದಿಗಾಗಲಿ ಮಾತನಾಡುವಾಗ ಹಿಂದಿಯಲ್ಲಿ ಮಾತನಾಡುತಿದ್ದರು. ಕೆಲವರು ಇಂಗ್ಲೀಷಿನಲ್ಲಿ ಮಾತನಾಡುತಿದ್ದರು. ಅವರು ಇಂಗ್ಲೀಷಿನವರಲ್ಲ, ದಕ್ಷಿಣ ಹಿಂದೂಸ್ಥಾನದವರು. ಮಧ್ಯೆ ಮಧ್ಯೆ ತಮಿಳು ತೆಲಗಿನ ಶಬ್ದಗಳನ್ನು ಉಪಯೋಗಿಸುತಿದ್ದುದರಿಂದ ಅವರು ಆಂಧ್ರರೋ ತಮಿಳರೋ ಇರಬೇಕೆಂದು ಊಹಿಸಿದ ದ್ಯಾವಪ್ಪ. ಅವರೊಂದಿಗೆ ಮಾತನಾಡಲು ಅವನಿಗೆ ಧೈರ್ಯಬರಲಿಲ್ಲ.

ದೇವರ ದರ್ಶನಕ್ಕೆ ಬಂದ ಭಕ್ತ ದೇವಸ್ಥಾನವನ್ನು ಸುತ್ತುವಂತೆ ಕಾಂಗ್ರೆಸ್ಸನ್ನು ನೋಡಲು ಬಂದ ದ್ಯಾವಪ್ಪ ಮಂಟಪವನ್ನು ಸುತ್ತಿದ. ಎರಡನೆಯದಿನ ಕೆಲವರು ಮರಾಠ ಮಿಶ್ರವಾದ ಕನ್ನಡ ಮಾತನಾಡುವುದನ್ನು ಕೇಳಿ ಇವನ ಎದೆ ಹಿಗ್ಗಿತು. ತಕ್ಷಣ ಅವರ ಮುಂದೆ ಹೋಗಿ ಕೈಜೋಡಿಸಿ "ನಮಸ್ಕಾರ" ಎಂದ. ಅವರು ಇವನನ್ನು ಕಾಲಿನಿಂದ ತಲೆಯವರೆಗೂ ನೋಡಿ, "ನೀವು ಮೈಸೂರಿನ ಕಡೆಯವರೇ?" ಎಂದು ಕೇಳದರು.

"ಹೌದು, ನಾನು ಕಾಂಗ್ರೆಸ್ ಅಧಿವೇಶನವನ್ನು ನೋಡಲು ಬಂದೆ. ಪ್ರತಿನಿಧಿಗಳಲ್ಲದವರಿಗೆ ತುಂಬಾ ಅನಾನುಕೂಲ. ನಾನು ಪ್ರತಿನಿಧಿಯಲ್ಲ" ಎಂದು ದ್ಯಾವಪ್ಪ ಹೇಳಿದ.

ಕರ್ಣಾಟಕದ ಕಾಂಗ್ರೆಸ್ ಪ್ರತಿನಿಧಿಗಳು ಲಾಹೋರಿಗೆ ಹೋದವರು ಬಹಳ ಕಡಿಮೆ. ಹೆಚ್ಚು ದೂರವಾದ್ದರಿಂದ ಅನೇಕಮಂದಿ ಪ್ರತಿನಿಧಿಗಳು ಬಂದಿರಲಿಲ್ಲ. ಆದ್ದರಿಂದ ಅವರಲ್ಲಿ ಒಬ್ಬರು ಹೇಳಿದರು, "ನೀವು ಮೈಸೂರಿನಿಂದ ಬಂದದ್ದು ಬಹಳ ಸಂತೋಷ. ಕರ್ಣಾಟಕ ಪ್ರಾಂತದಿಂದ ಅನೇಕಮಂದಿ ಪ್ರತಿನಿಧಿಗಳು ಬರಲಿಲ್ಲ. ಯಾರಾದರೂ ಒಬ್ಬ ಪ್ರತಿನಿಧಿಯ ಪರ ನೀವು ಅಧಿವೇಶನಕ್ಕೆ ಬರಬಹುದು."

ಅವರ ಮಾತನ್ನು ಕೇಳಿ ದ್ಯಾವಪ್ಪನಿಗೆ ಸಂತೋಷವಾಯಿತು. ಅವರನ್ನು ಹಿಂಬಾಲಿಸಿದ.

ಕಾಗ್ರೆಸ್ ಅಧಿವೇಶನದಲ್ಲಿ ಪ್ರತಿನಿಧಿಯಾಗಿ ಹೋಗುವವರಿಗಿಂತಲೂ ಎ. ಐ. ಸಿ. ಸಿ. ಮೆಂಬರಿಗೆ ಹೆಚ್ಚು ಸೌಲಭ್ಯ. ಸೌಲಭ್ಯ ಎಂದರೆ ಹಾಸಿಗೆ ಹೊದಿಕೆ, ಊಟ, ತಿಂಡಿ ಇವುಗಳಲ್ಲಿ ಅಲ್ಲ. ಅಧಿವೇಶನದಲ್ಲಿ ಬಹಳ ದೂರ ಇರಬೇಕಾಗುತ್ತದೆ. ಮುಖಂಡರು ವೇದಿಕೆಯಮೇಲೆ ಬಂದು ಭಾಷಣಮಾಡಿ ಹೋಗುತ್ತಾರೆ. ಎ. ಐ. ಸಿ. ಸಿ. ಮೀಟಿಂಗಿನಲ್ಲಿ ಹಾಗಲ್ಲ. ಎಲ್ಲ ಒಂದೇ ಕಡೆಯಲ್ಲಿ ಗಂಟೆಗಟ್ಟಲೆ ಕುಳಿತಿರುತ್ತಾರೆ. ಬಿಸಿಬಿಸಿ ಚರ್ಚೆ ಯಾಗುತಿರುತ್ತದೆ. ಪ್ರಸಿದ್ಧ ದೇಶಭಕ್ತರೆಲ್ಲ ಅಲ್ಲಿ ನೆರೆದಿರುತ್ತಾರೆ. ಅಲ್ಲಿ ಅವರನ್ನು ಸಮೀಪದಲ್ಲಿ ನೋಡಬಹುದು. ಅವರ ಮಾತುಕಥೆ ಕೇಳ ಬಹುದು. ಆದ್ದರಿಂದ ಎ. ಐ. ಸಿ. ಸಿ. ಮೀಟಿಂಗಿಗೆ ಹೋಗಲು ನಿಶ್ಚೈಸಿದ. ಹೋಗುವ ಬಗೆ ಹೇಗೆ? ಅಲ್ಲಿಗೆ ಹೋಗುವ ಉಪಾಯ ವನ್ನು ಹುಡುಕುತಿದ್ದ. ಎ. ಐ. ಸಿ. ಸಿ. ಮೀಟಿಂಗು ಪ್ರಾರಂಭವಾಯಿತು. ಸದಸ್ಯರು 'ಬ್ಯಾಡ್ಜ' ನ್ನು ಸ್ವಯಂ ಸೇವಕರಿಗೆ ತೋರಿಸಿ ಒಳಗೆ ಹೋಗು ತಿದ್ದರು. ಸದಸ್ಯರಲ್ಲಿ ಪ್ರಸಿದ್ಧರಾದ ಮುಖಂಡರು ಬಂದರು. ಆಗ ಸ್ವಯಂ ಸೇವಕರು ಅವರ ಹತ್ತಿರ 'ಬ್ಯಾಡ್ಜ' ನ್ನು ಕೇಳಲಿಲ್ಲ. ಮುಖಂಡರು ಸಹ ತಮ್ಮ 'ಬ್ಯಾಡ್ಜ' ನ್ನು ತೋರಿಸದೆ ಹಾಗೆ ಒಳಗೆ ಹೋದರು. ಸಮಯ ವನ್ನು ಕಾದುಕೊಂಡಿದ್ದ ನಮ್ಮ ದ್ಯಾವಪ್ಪ ಮುಖಂಡರ ಜೊತೆಯಲ್ಲಿ ಒಳಗೆ ತೂರಿಕೊಂಡ. ಅಲ್ಲಿ ಮುಖಂಡರ ಚರ್ಚೆಯನ್ನು ಕೇಳುತ್ತಾ ಕುಳಿತು ಕೊಂಡ. ಸುಮಾರು ಹದಿನೈದು ನಿಮಿಷಗಳ ತರುವಾಯ ಮಹಾತ್ಮಾ ಗಾಂಧಿಯವರು ಬಂದರು. ಒಳಗೆ ಅವರು ಪ್ರವೇಶಿಸುವಾಗ ತಮ್ಮ 'ಬ್ಯಾಡ್ಜ' ನ್ನು ಸ್ವಯಂಸೇವಕರಿಗೆ ತೋರಿಸಿ ಒಳಗೆ ಬಂದರು. ಅದನ್ನು ನೋಡಿದ ಸದಸ್ಯರೊಬ್ಬರು ಹೇಳಿದರು, "ನಾವು ಇನ್ನೂ ಸರಿಯಾದ ಶಿಸ್ತು ಕಲಿತಿಲ್ಲ. ನಾವು ಮಾಡಿದ ನಿಯಮವನ್ನು ನಾವೇ ಮುರಿಯುತ್ತೇವೆ. ಮಹಾತ್ಮಾ ಗಾಂಧಿಯವರು ಒಳಗೆ ಬರುವಾಗ ತಮ್ಮ 'ಬ್ಯಾಡ್ಜ' ನ್ನು ಸ್ವಯಂ ಸೇವಕರಿಗೆ ತೋರಿಸಿ ಬಂದರು. ನಾವು ನಿಯಮವನ್ನು ಮೀರಿ 'ಬ್ಯಾಡ್ಜ' ನ್ನು ತೋರಿಸದೆ ಬಂದೆವು. ಆ ತಪ್ಪಿಗೆ ಎಲ್ಲರೂ ಹೊರಗೆ ಹೋಗಿ 'ಬ್ಯಾಡ್ಜ' ನ್ನು ತೋರಿಸಿ ತಿರುಗಿ ಒಳಗೆ ಬರಬೇಕು."

ಅವರ ಮಾತನ್ನು ಕೇಳಿ ಎ. ಐ. ಸಿ. ಸಿ. ಯ ಸದಸ್ಯರೆಲ್ಲ ಎದ್ದು ಹೊರಗೆ ಬಂದರು. ಸಭೆ ಖಾಲಿಯಾದ ಮೇಲೆ ಕ್ರಮವಾಗಿ ' ಬ್ಯಾಡ್ಜ 'ನ್ನು ಸ್ವಯಂ ಸೇವಕರಿಗೆ ತೋರಿಸಿ ಎ. ಐ. ಸಿ. ಸಿ. ಪ್ರತಿನಿಧಿಗಳು ಒಳಗೆ ಹೋದರು. ದ್ಯಾವಪ್ಪನಂಥ ಇಬ್ಬರು ಮೂವರು ಹೊರಗೆ ನಿಂತರು. ಆಶಾಭಂಗವಾದ್ದರಿಂದ ದ್ಯಾವಪ್ಪನಿಗೆ ದುಃಖವಾಯಿತು. ಆದರೆ ಮಹಾತ್ಮಾ ಗಾಂಧಿಯವರು ತಮ್ಮ ' ಬ್ಯಾಡ್ಜ ' ನ್ನು ಸ್ವಯಂ ಸೇವಕರಿಗೆ ತೋರಿಸಿ ಬಂದ ಚಿತ್ರ ಅವನ ಕಣ್ಣಿನಲ್ಲಿ ಕುಣಿಯುತಿತ್ತು. ಗಾಂಧಿಯವರು ಯಾವ ರೀತಿಯಲ್ಲಿ ಮಹಾತ್ಮರಾದರು ಎಂಬ ವಿಚಾರ ಸ್ವಲ್ಪ ಅರ್ಥವಾಗ ಹತ್ತಿತು. ಅವರು ನಿಯಮಕ್ಕೆ ಹೆಚ್ಚು ಬೆಲೆ ಕೊಡುತ್ತಾರೆ. ತಾವು ಮಾಡಿಕೊಂಡ ನಿಯಮವನ್ನು ತಾವೇ ಭಂಗಪಡಿಸುವುದಿಲ್ಲ. ದೊಡ್ಡವರಾಗಲಿ, ಸಣ್ಣವರಾಗಲಿ, ಶ್ರೀಮಂತರಾಗಲಿ, ಬಡವರಾಗಲಿ ಎಲ್ಲರ ಹತ್ತಿರವೂ ಒಂದೇ ತರದ ಆಚರಣೆ.

ಮಹಾತ್ಮಾ ಗಾಂಧಿಯವರ ವಿಚಾರ ಪ್ರಪಂಚವೇ ಬಲ್ಲದು. ಅವರ ದರ್ಶನಕ್ಕೋಸ್ಕರ ಜನರು ಹುಚ್ಚರಹಾಗೆ ನುಗ್ಗುತ್ತಾರೆ. ಕಾಂಗ್ರೆಸ್ಸೆಂದರೆ ಮಹಾತ್ಮಾ ಗಾಂಧಿ. ಹಾಗಿದ್ದರೂ ಅವರು ವಿಾಟಿಂಗಿಗೆ ಹೋಗಬೇಕಾದರೆ ಕ್ರಮಬದ್ಧ ರೀತಿಯಲ್ಲಿಯೇ ಹೋಗುತ್ತಾರೆ. ದ್ಯಾವಪ್ಪ ಮನಸ್ಸಿನಲ್ಲಿ ಅಂದುಕೊಂಡ—ನಾವು ಅವರಹಾಗೆ ಆಚರಿಸುವುದಿಲ್ಲ; ಆದ್ದರಿಂದ ನಮ್ಮ ಸ್ಥಿತಿ ಹೀಗೆ. ಹಿಂದೆ ತಾನು ಮಾಡುತಿದ್ದ ಕಾರ್ಯಗಳೆಲ್ಲ ಜ್ಞಾಪಕಕ್ಕೆ ಬಂದವು. ಕೆಲವು ಸಾರಿ ವಿನೋದಕ್ಕಾಗಿ ಮಾಡುತ್ತಿದ್ದರೂ ಅವುಗಳ ಮೂಲದಲ್ಲಿ ನಿಯಮಕ್ಕೆ ಭಂಗ ತರುವ ಮನೋಭಾವನೆ ಅಡಗಿರುತ್ತಿತ್ತು. ಎಡಗಡೆ ನಡೆಯಿರಿ ಎಂದು ಬರೆದಿದ್ದರೆ ಬಲಗಡೆಯಲ್ಲಿ ನಡೆಯುವುದು; ದೀಪವಿಲ್ಲದೆ ಸೈಕಲ್ಲಿನಮೇಲೆ ಸವಾರಿ ಮಾಡುವುದು. ಇವೆಲ್ಲಾ ಜ್ಞಾಪಕಕ್ಕೆ ಬಂದವು. ಇವು ವ್ಯಕ್ತಿಗಾಗಲಿ, ದೇಶಕ್ಕಾಗಲಿ, ಕೀರ್ತಿ ತರುವುದಿಲ್ಲ. ನಿಯಮ ಪರಿಪಾಲನೆ ನಮ್ಮ ಪ್ರಥಮ ಕರ್ತವ್ಯ. ಇತರರಿಗೆ ಸಹಾಯಕನಾಗಿ ಬದುಕುವುದೇ ತನ್ನ ಸುಖಕ್ಕೆ ಕಾರಣ. ಇದು ಸಮಾಜದ ಉನ್ನತಿಗೆ ತಳಹದಿ. ಪ್ರತಿಯೊಬ್ಬನೂ ಸಮಾಜ ಮತ್ತು ದೇಶಕ್ಕೆ ಮಾಡುವ ದೊಡ್ಡ ಉಪಕಾರ ಎಂದರೆ ನಿಯಮದ ಪರಿಪಾಲನೆ. ಎ ಐ. ಸಿ. ಸಿ.

ಮಾಟಂಗು ತಪ್ಪಿದರೂ ಇದರಿಂದ ತನಗೊಂದು ಪಾಠ ಸಿಕ್ಕಿತೆಂದು ದ್ಯಾವಪ್ಪ ಸಮಾಧಾನಪಟ್ಟುಕೊಂಡ.

ಈ ಘಟನೆ ದ್ಯಾವಪ್ಪನ ಮನಸ್ಸಿನಲ್ಲಿ ಇನ್ನೊಂದು ಭಾವನೆಯನ್ನು ಹುಟ್ಟಿಸಿತು.

ನಾನು ನಿರಪರಾಧಿ. ಹುಲಿ ಸಿದ್ದನನ್ನು ಕೊಂದಿದೆ. ಪೋಲೀಸಿನವನಿಗೆ ಹೆದರಿ ನಾನು ತಲೆಮರಸಿಕೊಂಡು ತಿರುಗಬೇಕೆ? ನ್ಯಾಯಾನ್ಯಾಯಗಳ ವಿವೇಚನೆಯಿಲ್ಲದೆ ಸರಕಾರವು ಶಿಕ್ಷೆಯನ್ನು ವಿಧಿಸುವುದೆ? ನಾನು ಎಂಥ ಹೇಡಿ? ಊರಿಗೆ ಹೋಗುವುದು ನನ್ನ ಪ್ರಥಮ ಕರ್ತವ್ಯ ಎಂದು ಯೋಚಿಸಿ ಊರಿಗೆ ಹೊರಡಲು ಸಿದ್ಧನಾದ.

---

## ೧೪. ಗೆದ್ದ ಹೇಡಿಯೋ ಸೋತ ವೀರನೋ?

ಬೆಂಗಳೂರಿನಿಂದ ಹೊರಡುವಾಗ ದ್ಯಾವಪ್ಪ ಹೆಚ್ಚು ರೂಪಾಯಿಗಳನ್ನು ತೆಗೆದುಕೊಂಡಿರಲಿಲ್ಲ. ಮದ್ರಾಸಿನಲ್ಲಿ ಒಂದುವಾರ ಇದ್ದು ಬರುವ ಉದ್ದೇಶದಿಂದ ಹೊರಟಿದ್ದ. ಮದ್ರಾಸಿಗೆ ಹೋದಮೇಲೆ ಬೊಂಬಾಯಿಗೆ ಹೋಗುವ ಯೋಚನೆ ಹುಟ್ಟಿತ್ತು. ಬೊಂಬಾಯಿಗೆ ಹೋದಮೇಲೆ ಅಹಮದಾಬಾದಿಗೆ ಹೋಗುವ ಮನಸ್ಸಾಯಿತು. ಹೀಗೆ ಲಾಹೋರಿನವರೆಗೂ ಸಂಚಾರಮಾಡಿದ್ದ. ಕೈಯಲ್ಲಿ ಇದ್ದ ಹಣವೆಲ್ಲ ವೆಚ್ಚವಾಯಿತು. ಯಾವ ಸ್ಥಳದಲ್ಲಿಯೂ ಎರಡು ಮೂರು ದಿನಗಳಿರಲಿಲ್ಲ. ಲಾಹೋರಿಗೆ ಬಂದು ಕಾಂಗ್ರೆಸ್ಸಿನ ಪ್ರತಿನಿಧಿಯಾದ ಮೇಲೆ ಊರಿಗೆ ತಂತಿ ಮಾಡಿದ. ಹೊನ್ನುಗದ್ದೆ ಇರುವುದು ಹಳ್ಳಿಯಲ್ಲಿ. ತಂತಿ ಹೊನ್ನುಗದ್ದೆ ತಲಪಿ, ಅವರು ಅಂಚೆಮನೆಗೆ ಬಂದು ತಂತಿಮೂಲಕ ಹಣ ಮನಿಯಾರ್ಡರು ಮಾಡಬೇಕಾದರೆ ನಾಲ್ಕೈದು ದಿನ ಬೇಕು. ಕಾಂಗ್ರೆಸ್ಸಿನ ಅಧಿವೇಶನ ಮುಗಿದ ಮೇಲೆ ಲಾಹೋರಿನಲ್ಲಿ ದ್ಯಾವಪ್ಪ ಏನು ಮಾಡಬೇಕು? ಕೈಯಲ್ಲಿ ಹದಿನೈದು ರೂಪಾಯಿ ಉಳಿದಿತ್ತು. ಇನ್ನೆರಡುದಿನ ಲಾಹೋರಿನಲ್ಲಿ ಇದ್ದರೆ

ಅದೂ ಖರ್ಚು. ಬರಿಕೈಯಲ್ಲಿ ಏನು ಮಾಡುವುದು? ಕೈಯಲ್ಲಿ ಸ್ವಲ್ಪ ಹಣವಿರುವಾಗಲೇ ಊರು ತಲಪುವುದು ಜಾಣತನ. ಇಲ್ಲದಿದ್ದರೆ ಇನ್ನೂ ಕಷ್ಟಕ್ಕೆ ಗುರಿಯಾಗಬೇಕಾಗುವುದು.

ಇದರಮಧ್ಯೆ ಲಾಹೋರಿನಲ್ಲಿ ಅಸಾಧ್ಯ ಚಳಿ. ಚಳಿ ಸಹಿಸುವುದು ದ್ಯಾವಪ್ಪನಿಗೆ ಕಷ್ಟವಾಯಿತು. ಅವನ ಹತ್ತಿರ ಸಾಧಾರಣವಾದ ಬಟ್ಟೆಬರೆ ಇದ್ದವು. ಕೊಂಡುಕೊಳ್ಳಲು ಹಣ ಸಾಲದು. ಎಷ್ಟು ಹೊದ್ದು ಕೊಂಡರೂ ಚಳಿ ಮೈ ಕೊರೆಯುವುದು ; ಬೆರಳನ್ನು ಮಡಿಸಲು ಸಾಧ್ಯ ವಾಗುವುದಿಲ್ಲ. ಹಣ ಬರುವ ನಿರೀಕ್ಷಣೆಯಲ್ಲಿರದೆ ಹೊರಡುವುದು ಕ್ಷೇಮಕರ ಎಂದು ನಿಶ್ಚೈಸಿದ. ಪ್ರಯಾಣಕ್ಕೆ ಅವನ ಮುಂದೆ ಇದ್ದ ಮಾರ್ಗ ಒಂದೇ.–ಟಿಕೀಟಿಲ್ಲದೆ ಪ್ರಯಾಣ ಮಾಡುವುದು.

ರಾತ್ರಿ ಎಂಟುಗಂಟೆಗೆ ಲಾಹೋರಿನಿಂದ ದೆಹಲಿಗೆ ರೈಲು ಹೊರ ಟಿತು. ದ್ಯಾವಪ್ಪ ಆ ರೈಲಿನಲ್ಲಿ ಸಾಮಾನು ಇಡುವ ಸ್ಥಳದಲ್ಲಿ ಹತ್ತಿ ಮಲಗಿಕೊಂಡ. ಮಾರನೆಯದಿನ ಮಧ್ಯಾಹ್ನ ರೈಲು ದಿಲ್ಲಿ ಮುಟ್ಟಿತು. ಪ್ರಯಾಣದಲ್ಲಿ ಅನಾನುಕೂಲವೇನೂ ಆಗಲಿಲ್ಲ. ದಿಲ್ಲಿಯಿಂದ ರೈಲು ಸಾಯಂಕಾಲ ಹೊರಡುವುದರಿಂದ ಹೊರಗೆ ಹೋಗದೆ ರೈಲು ಹೊರಡು ವವರೆಗೆ ಸ್ಟೇಷನ್ನಿನಲ್ಲಿದ್ದ. ಗ್ರಾಂಡ್ ಟ್ರಂಕ್ ಎಕ್ಸ್‌ಪ್ರೆಸ್ ದೆಹಲಿಯಿಂದ ನೆಟ್ಟಗೆ ಮದ್ರಾಸಿಗೆ ಹೋಗುತ್ತದೆ. ಅದು ಹೊರಟ ಕೂಡಲೇ ಅವನು ಹತ್ತಿದ. ಮದ್ರಾಸು ತಲಪಲು ಎರಡು ರಾತ್ರಿ ಎರಡು ಹಗಲು ಬೇಕಾ ಗುತ್ತದೆ. ದ್ಯಾವಪ್ಪ ರಾತ್ರಿ ಸಾಮಾನು ಇಡುವ ಸ್ಥಳದಲ್ಲಿ ಹತ್ತಿ ಮಲಗು ತಿದ್ದ ; ಹಗಲಿನಲ್ಲಿ ಸ್ಟೇಷನ್ನುಗಳಲ್ಲಿ ರೈಲು ನಿಂತ ಕೂಡಲೇ ಗಾಡಿಯಿಂದ ಇಳಿದು ಬಿಡುತಿದ್ದ. ಗಾಡಿ ಹೊರಡುವವರೆಗೂ ಜನರ ಗುಂಪಿನಲ್ಲಿದ್ದು ಗಾಡಿ ಹೊರಟ ತಕ್ಷಣ ಅದನ್ನು ಹತ್ತುತಿದ್ದ. ಹೀಗೆ ಮದ್ರಾಸಿನವರೆಗೂ ಪ್ರಯಾಣ ನಡೆಯಿತು. ಗಾಡಿ ಹತ್ತುವಾಗಲೂ ಇಳಿಯುವಾಗಲೂ ಅವನ ಗಮನವೆಲ್ಲ ಟಿಕೆಟ್ ಕಲೆಕ್ಟರ ಮೇಲಿರುತಿತ್ತು. ಅವನು 'ಚಕ್' ಮಾಡಿದ ಗಾಡಿಯನ್ನು ನೋಡಿ ಹತ್ತುತಿದ್ದ. ರೈಲು ಮದ್ರಾಸನ್ನು ತಲಪಿತು.

ಮದ್ರಾಸನ್ನು ತಲಪುವಾಗ ಅವನ ಹತ್ತಿರ ನಾಲ್ಕು ರೂಪಾಯಿ ಉಳಿದಿತ್ತು. ಖಾರ, ಹುಳಿಯ ಊಟ ತಿಂಡಿಗಳಿಲ್ಲದೆ ಬಹಳ ದಿನಗಳಾಗಿತ್ತು.

ಹೋಟಲಿಗೆ ಹೋಗುವ ಆಶೆ ಹುಟ್ಟಿತು. ರೈಲು ಇಳಿದವನು ಪಕ್ಕದಲ್ಲಿರುವ ಗಾಡಿಗಳನ್ನು ದಾಟುತ್ತಾಬಂದ. ಆರೇಳು ಗಾಡಿ ದಾಟಿದಮೇಲೆ ಕಬ್ಬಿಣದ ಬೇಲಿ ಸಿಕ್ಕಿತು. ಅದನ್ನು ದಾಟಿ ಹೊರಗೆ ಬಂದ. ಅಲ್ಲಿಂದ ಸಮೀಪದ ಹೋಟಲಿಗೆ ಹೋಗಿ ಹೊಟ್ಟೆ ತುಂಬಾ ಊಟಮಾಡಿ ಸ್ಟೇಷನ್ನಿಗೆ ಬಂದ. ಈ ಸಾರಿ ಅವನೊಂದು ಉಪಾಯ ಯೋಚಿಸಿದ. ದೇವರ ದಯೆಯಿಂದ ಇಲ್ಲಿಯವರೆಗೂ ಸಿಕ್ಕಿಬೀಳದೆ ಬಂದೆ. ಉತ್ತರ ದೇಶದ ಜನರ ಸ್ಥಿತಿಯೇ ಬೇರೆ. ಇದು ದಕ್ಷಿಣದೇಶ. ಮಲಗಿದ್ದವರನ್ನು ದೂಡಿ ಎಬ್ಬಿಸಿ 'ಚಕ್' ಮಾಡುವ ಜನ ಇಲ್ಲಿ. ಆದ್ದರಿಂದ ಟಿಕೆಟಿಲ್ಲದೆ ಪ್ರಯಾಣ ಮಾಡುವುದು ಕ್ಷೇಮವಲ್ಲ. ಬೆಂಗಳೂರಿಗೆ ಟಿಕೆಟು ಕೊಳ್ಳಲು ಹಣ ಸಾಲದು. ಸಮೀಪದ ಒಂದು ಸ್ಟೇಷನ್ನಿಗೆ ಟಿಕೆಟ್ಟು ಕೊಂಡುಕೊಂಡು ಮಲಗುವುದು ಉತ್ತಮ. ಆಕಸ್ಮಾತ್ತಾಗಿ ದಾರಿಯಲ್ಲಾಗಲಿ, ಬೆಂಗಳೂರಿನಲ್ಲಾಗಲಿ ಸಿಕ್ಕಿಬಿದ್ದರೆ ಹೇಳುವುದಕ್ಕೆ ನೆಪ ಸಿಗುತ್ತದೆ. ಗಾಡಿಯಲ್ಲಿ ಮಲಗಿಬಿಟ್ಟೆ, ಇಳಿಯಲು ಆಗಲಿಲ್ಲ ಎಂದು ಹೇಳಬಹುದು. ಹೀಗೆ ಯೋಚಿಸಿ ಟಿಕೆಟನ್ನು ಕೊಂಡುಕೊಂಡು ಬೆಂಗಳೂರು ಗಾಡಿಯಲ್ಲಿ ಮಲಗಿಕೊಂಡ. ಹೊಟ್ಟೆತುಂಬಾ ಊಟಮಾಡಿದ್ದರಿಂದ ನಿಜವಾಗಿಯೂ ತುಂಬಾ ನಿದ್ದೆ ಬಂತು. ಎಚ್ಚರವಾದಾಗ ಬೆಂಗಳೂರಿನ ಹತ್ತಿರ ರೈಲು ಗಾಡಿಯಿತ್ತು.

ಬೆಂಗಳೂರು ಸಮೀಪಿಸಿದಹಾಗೂ ದ್ಯಾವಪ್ಪನ ಎದೆ ಜೋರಾಗಿ ಬಡಿದುಕೊಳ್ಳಲಾರಂಭಿಸಿತು. ಈ ಬಡತನದಲ್ಲಿ ಊರನ್ನು ಸೇರುತ್ತಿದ್ದೇನೆಂಬ ಆನಂದ ರೇಖೆ ಮಾಯವಾಯಿತು. ಟಿಕೆಟು 'ಚಕ್' ಮಾಡಿದರೆ ಏನು ಮಾಡಲಿ? ಸಿಟಿ ಸ್ಟೇಷನ್ನಿನಿಂದ ಹೇಗೆ ಹೊರಗೆ ಹೋಗಲಿ? ಈ ಯೋಚನೆ ಬಲವಾದವು. ಇವನು ಈ ಯೋಚನೆಯಲ್ಲಿದ್ದಹಾಗೆ ಸ್ಟೇಷನ್ ಬಂತು; ರೈಲು ನಿಂತಿತು; ಪ್ರಯಾಣಿಕರು ಇಳಿದರು. ಅವರೊಂದಿಗೆ ಇವನೂ ಇಳಿದ. ಕೂಲಿಯವರು ಮುತ್ತಿಗೆ ಹಾಕಿದರು. ಅವರ ಮೇಲೆ ಉರುಬಿದ್ದ. ಪ್ರಯಾಣಿಕರೊಂದಿಗೆ ಇವನೂ ಹೊರಟ. ಗೇಟಿನಲ್ಲಿ ಜನರ ಗುಂಪು. ಜನರಮೇಲೆ ಜನರ ನುಗ್ಗಾಟ. ಟಿಕೆಟು ಕಲೆಕ್ಟರಿಗೆ ತಡೆದು ತಡೆದು ಸಾಕಾಯಿತು. ಟಿಕೆಟುಗಳನ್ನು ಅವರ ಕೈಯಿಂದ

ತೆಗೆದುಕೊಳ್ಳುವದು ಕಷ್ಟವಾಗಿತ್ತು. ಪ್ರಯಾಣಿಕರಿಗೆ ಟಿಕೆಟು ತೆಗೆಯಲು ಜೋಬಿಗೆ ಕೈಹಾಕಿದರೆ ತೆಗೆಯುವುದೇ ಕಷ್ಟ.

ಸಾಮಾನು ತೆಗೆದುಕೊಂಡು ಹೋಗುತ್ತಿದ್ದ ಒಬ್ಬನನ್ನು ಟಿಕೆಟು ಕಲೆಕ್ಟರು ತಡೆದು ನಿಲ್ಲಿಸಿದ. ಹಿಂದಿನಿಂದ ಪ್ರಯಾಣಿಕರು ಜೋರಾಗಿ ನುಗ್ಗಿದರು ಈ ನುಗ್ಗಾಟದಲ್ಲಿ ಟಿಕೆಟಿಲ್ಲದೆ ಹೋಗುತಿದ್ದ ಒಬ್ಬ ವ್ಯಕ್ತಿಯನ್ನು ಕಲೆಕ್ಟರು ಹಿಡಿದನು. ಇದನ್ನು ನೋಡಿ ದ್ಯಾವಪ್ಪನಿಗೆ ನಡುಕ ಹುಟ್ಟಿತು. ಹಿಂದಕ್ಕೆ ಹೋಗಲು ಪ್ರಯತ್ನಪಟ್ಟ. ಆ ನುಗ್ಗಾಟದಲ್ಲಿ ಸಾಧ್ಯವಾಗಲಿಲ್ಲ. ಹಿಂದಕ್ಕೆ ಹೋಗುವ ಬದಲು ಮುಂದಕ್ಕೆ ಬಂದ. ಜನರು ತಳ್ಳುವುದು ಹೆಚ್ಚಾಯಿತು. ಹಿಂದಕ್ಕೆ ಹೋಗುವ ಪ್ರಯತ್ನದಲ್ಲಿ ಟಿಕೆಟು ಕಲೆಕ್ಟರ ಗಮನ ತನ್ನಮೇಲೆ ಬೀಳಬಹುದೆಂಬ ಭಯ. ದೇವರ ಮೇಲೆ ಭಾರ ಹಾಕಿ, ವಿಷಕುಡಿದಹಾಗೆ ಮುಂದೆ ನುಗ್ಗಿಯೇ ಬಿಟ್ಟ. ಇವನ ಕಡೆಗೆ ಟಿಕೆಟು ಕಲೆಕ್ಟರು ಕೈನೀಡಿದ. ಅವನ ಮುಖ ನೋಡದೆ ತನ್ನ ಕೈಯಲ್ಲಿದ್ದ ಟಿಕೆಟನ್ನು ಕೊಟ್ಟು ಮುಂದೆ ಹೋದ. ಎಲ್ಲಾ ಟಿಕೆಟುಗಳಂತೆ ಇದನ್ನು ತೆಗೆದುಕೊಂಡು ಶೇಖರಿಸಿದ್ದ ಟಿಕೆಟನೊಂದಿಗೆ ಸೇರಿಸಿ ಕಲೆಕ್ಟರು ಮತ್ತೊಬ್ಬರ ಟಿಕೀಟಿಗೆ ಕೈನೀಡಿದ ಇಷ್ಟರಲ್ಲಿ ದ್ಯಾವಪ್ಪ ಸ್ಟೇಷನ್ ದಾಟಿದ್ದ.

ಸ್ಟೇಷನ್ ಬಿಟ್ಟು ರಸ್ತೆಗೆ ಬರುತ್ತಲೇ ಭಯದಿಂದ ಭಾರವಾಗಿದ್ದ ಅವನ ಮನಸ್ಸು ಹೂವಿನಂತೆ ಹಗುರವಾಯಿತು. ಕಳೆದುಕೊಂಡ ವಿಚಾರ ಶಕ್ತಿ ತಿರುಗಿ ಘಮಘಮಿಸಿತು. ಬಂಧನದಿಂದ ಬಿಡುಗಡೆಯಾದವನಂತೆ ಸುಖಿಯಾದನು. ಕಾಲುಗಳಿಗೆ ರೆಕ್ಕೆ ಬಂದಿವೆಯೋ ಎಂಬ ರೀತಿಯಲ್ಲಿ ನಡಿಗೆ ಅನಾಯಾಸವಾಗಿತ್ತು.

ಟಿಕೆಟಿಲ್ಲದೆ ಪ್ರಯಾಣಮಾಡಿ ಊರನ್ನು ತಲಪಿದ. ಆದರೆ ಅವನ ಮನಸ್ಸಿನಲ್ಲಿ ಕೊರತೆ.

ಟಿಕೆಟಿಲ್ಲದೆ ಲಾಹೋರಿನಿಂದ ಇಲ್ಲಿಯವರೆಗೆ ಪ್ರಯಾಣಮಾಡಿದೆ. ಆದುದರಿಂದ ನಾನು ಏನು ಜಯಸಿದ ಹಾಗಾಯಿತು ? ಯಾವ ಮಹತ್ಕಾರ್ಯವನ್ನು ನಾನು ಸಾಧಿಸಿದೆ ? ಯಾವಾಗಲೂ ನಿರ್ಭಯತೆಯಿಂದ ತಿರುಗಿತಿದ್ದವನು ರೈಲು ಪ್ರಯಾಣದಲ್ಲಿ ಮುಚ್ಚುಮರೆಯಲ್ಲಿರುತ್ತಿದ್ದೆ. ನನ್ನ ಹತ್ತಿರ

ಹಣವಿರಲಿಲ್ಲ, ಆದ್ದರಿಂದ ನಾನು ಹೀಗೆ ಹೊರಟೆ. ಈ ಯುಕ್ತಿ ಮನಸ್ಸಿಗೆ ಸಮಾಧಾನ ತರುವುದೇ? ಕೈಯಲ್ಲಿ ಹಣ ಇಲ್ಲದಿರುವುದರಿಂದಲೇ ಪ್ರಪಂಚದಲ್ಲಿ ಜನರು ಎಷ್ಟೋ ಅನರ್ಥಗಳನ್ನು ಮಾಡುತ್ತಾರೆ. ಅವರೂ ಹೀಗೆ ಯೋಚಿಸಬಹುದು? ಯುದ್ಧದಲ್ಲಿ ಗೆದ್ದವರು ವೀರರಾಗುತ್ತಾರೆ; ಸೋತವರು ಹೇಡಿಗಳಾಗುತ್ತಾರೆ. ನಾನು ಗೆದ್ದ ಹೇಡಿಯೋ? ಅಥವಾ ಸೋತ ವೀರನೇ?

ಮನುಷ್ಯನಲ್ಲಿ ಎರಡು ವಸ್ತುಗಳಿರುತ್ತವೆ. ಶರೀರ ಮತ್ತು ಆತ್ಮ. ಶಾರೀರಕ ಸಾಮ್ರಾಜ್ಯದಲ್ಲಿ ದ್ಯಾವಪ್ಪ ಗೆದ್ದಿದ್ದ. ಆದರೆ ಆತ್ಮ ಸಾಮ್ರಾಜ್ಯದಲ್ಲಿ ಅವನು ಸೋತಿದ್ದ. ಶರೀರವು ಹಣವನ್ನು ಸಂಪಾದಿಸುವುದೇ ವಿನಾ ಹಣವು ಶರೀರವನ್ನು ಸಂಪಾದಿಸುವುದಿಲ್ಲ. ದ್ಯಾವಪ್ಪ ಆತ್ಮವನ್ನು ಮಾರಿ ಹಣವನ್ನು ಸಂಪಾದಿಸಿದ್ದ. ಆದ್ದರಿಂದ ತಾನು ಮಾಡಿಬಂದ ಸಾಹಸವನ್ನು ವರ್ಣಿಸಲು ಯಾರ ಮುಂದೆಯೂ ಬಾಯಿ ತೆಗೆಯುತ್ತಿರಲಿಲ್ಲ. ತನ್ನ ಮನಸ್ಸನ್ನು ಹಗುರಮಾಡಿಕೊಳ್ಳಲು ತಾನು ರೈಲಿನಲ್ಲಿ ಪ್ರಯಾಣ ಮಾಡಿದ ಟಿಕೆಟಿನ ಹಣವನ್ನು ರೈಲ್ವೆ ಕಂಪನಿಯವರಿಗೆ ಕಳುಹಿಸಿದ.

---

## ೧೫. ಪುಸ್ತಕ ಪರೀಕ್ಷೆಯ ತರುವಾಯ ಜೀವನದ ಪರೀಕ್ಷೆ ಪ್ರಾರಂಭ

ಪೋಲೀಸಿನವನ ದೆಸೆಯಿಂದ ದ್ಯಾವಪ್ಪನಿಗೆ ಹಿಂದೂಸ್ಥಾನದ ಯಾತ್ರೆಯಾಯಿತು. ಈ ಯಾತ್ರೆ ಅವನನ್ನು ಒಂದು ಹದಕ್ಕೆ ತಂದಿತು.

ಪರೀಕ್ಷೆ ಸಮೀಪಿಸಿತ್ತು. ಹುಡುಗರು ಓದುವುದರಲ್ಲಿ ನಿರತರಾಗಿದ್ದರು. ಯಾತ್ರೆಯಿಂದ ಒಂದು ತಿಂಗಳು ನಷ್ಟವಾಗಿದ್ದರೂ ದ್ಯಾವಪ್ಪ ಕಳೆದ ಸಮಯಕ್ಕೆ ದುಃಖಪಡದೆ ಉಳಿದ ಸಮಯವನ್ನು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳಲು ಮಗ್ನನಾದನು. ಪರಿಶ್ರಮಕ್ಕೆ ಸರಿಯಾಗಿ ಮೊದಲನೆಯ ದರ್ಜೆಯಲ್ಲಿಯೂ ಉತ್ತೀರ್ಣನಾದನು.

ದ್ಯಾವಪ್ಪ ಮೊದಲನೆ ತರಗತಿಯಲ್ಲಿ ಉತ್ತೀರ್ಣನಾದುದರಿಂದ ಎಲ್ಲರಿಗೂ ಸಂತೋಷ. ಯಾವುದಾದರೊಂದು ದೊಡ್ಡ ನೌಕರಿ ಸಿಗುವುದೆಂದು ಇವನ ಸ್ನೇಹಿತರು ನೆನಸಿದ್ದರು. ಅನೇಕರು ಅನೇಕರೀತಿಯ ಸಲಹೆ ಕೊಟ್ಟರು.

ಲಾಯರಾಗಲು ಬಲವಂತ ಮಾಡಿದವರು ಕೆಲವರು. ಡಾಕ್ಟರ್ ಹಣಗಳಿಸುತಿರುವುದನ್ನು ನೋಡಿ ಡಾಕ್ಟರಾಗಲು ಹೇಳಿದರು ಕೆಲವರು. ಅಮಲ್ದಾರನಾದರೆ ಅಧಿಕಾರ, ಹಣ ಎರಡನ್ನೂ ಗಳಸಬಹುದಾಗಿದ್ದರಿಂದ, ದ್ಯಾವಪ್ಪ ಅಮಲ್ದಾರನಾಗುವನೆಂದು ಕೆಲವರು ನಂಬಿದ್ದರು. ದ್ಯಾವಪ್ಪ ಅಮಲ್ದಾರನಾಗುವ ವಿಚಾರವನ್ನು ಮೊದಲು ತಮ್ಮಯ್ಯಗೌಡರು ನಂಬಲಿಲ್ಲ. ಅವನು ಅಮಲ್ದಾರನಾಗುವುದು ನಿಜವೆಂದು ಅನೇಕ ಜನರ ಬಾಯಲ್ಲಿ ಬಂದಮೇಲೆ ಅವರಿಗೆ ಅಪರಿಮಿತ ಆನಂದ ಉಂಟಾಯಿತು.

ಒಂದು ರೀತಿಯಲ್ಲಿ ದ್ಯಾವಪ್ಪನ ಮನಸ್ಸೂ ಡೋಲಾಯಮಾನವಾಗಿತ್ತು. ಯಾವ ಹಾದಿ ತುಳಿಯಬೇಕೆಂದು ನಿಶ್ಚೈಸಿರಲಿಲ್ಲ. ಇಂಥ ಅಶಾಂತ ಸಮಯಕ್ಕೆ ನಗರ ಉಪಯುಕ್ತವಲ್ಲ. ಹಳ್ಳಿಯಲ್ಲಿ ಕೆಲವು ದಿನ ಇರಲು ಹೊನ್ನುಗದ್ದೆಗೆ ಬಂದ. ಇವನನ್ನು ನೋಡಿದರೆ ಹಳ್ಳಿಯವರಿಗೆ ಮೊದಲಿನ ಸಲಿಗೆ ಇರಲಿಲ್ಲ. ಸ್ವಲ್ಪ ದೂರದಿಂದಲೇ ಇವನ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು.

ಮನಸ್ಸಿನ ಶಾಂತಿಗೋಸ್ಕರ ದ್ಯಾವಪ್ಪ ಹಳ್ಳಿಗೆ ಬಂದಿದ್ದರೂ ಇಲ್ಲಿ ಇನ್ನೊಂದು ಗಂಟುಬಿತ್ತು. ವರನನ್ನು ಹುಡುಕುವವರು ಹೊನ್ನುಗದ್ದೆಗೂ ಬರಲು ಪ್ರಾರಂಭಿಸಿದರು. ಆತನ ತಾಯಿಗೆ ತಾನು ಕಣ್ಣುಮುಚ್ಚುವ ಮೊದಲು ಸೊಸೆಯ ಮುಖವನ್ನು ನೋಡಬೇಕೆಂಬ ಆಶೆ. ಅನೇಕರು ಹೆಣ್ಣುಕೊಡಲು ಮುಂದೆಬರುವುದನ್ನು ನೋಡಿ ಆತನ ತಾಯಿಗೆ ಹಂಬಲ ಹೆಚ್ಚಾಯಿತು.

ಕೆರೆಹಾಳಿ ಕೃಷ್ಣಪ್ಪಗೌಡರು ಶ್ರೀಮಂತರು. ಅವರಲ್ಲಿ ನೆಂಟಸ್ತಿಕೆ ಬೆಳೆಸುವುದೇ ದೊಡ್ಡತನ ಎಂದು ಹಳ್ಳಿಯವರ ನಂಬಿಕೆ. ಅವರೇ ತಮ್ಮ ಮಗಳನ್ನು ಕೊಡುವುದಾಗಿ ಹೇಳಿ ಕಳುಹಿಸಿದ್ದರು. ಇದನ್ನು ಕೇಳಿ

ತಮ್ಮಯ್ಯಗೌಡರಿಗೂ ದ್ಯಾವಪ್ಪನತಾಯಿಗೂ ಆನಂದ. ದ್ಯಾವಪ್ಪನ ಬಾಲ್ಯಸ್ನೇಹಿತ ಬಿಸಿಲುಮನೆ ನಾಗಯ್ಯ ಈ ಪ್ರಸ್ತಾಪವನ್ನು ತಂದಿದ್ದನು.

ಅಲ್ಲಿ ಇಲ್ಲಿಯ ಮಾತನಾಡಿ ನಾಗಯ್ಯ ಹೇಳಿದ, "ಕೃಷ್ಣಪ್ಪಗೌಡರಿಗೆ ಇಲ್ಲಿ ನೆಂಟಸ್ತಿಕೆ ಬೆಳಸಲು ತುಂಬಾ ಮನಸ್ಸಿದೆ. ಅಮ್ಮನನ್ನು ವಿಚಾರಿಸಿದೆ. ತಮ್ಮಯ್ಯ ಗೌಡರನ್ನು ಕೇಳಿದೆ. ಅವರಿಬ್ಬರಿಗೂ ಈ ನೆಂಟಸ್ತಿಕೆಗೆ ಒಪ್ಪಿಗೆ ಇದೆ. ನೀನು ಒಪ್ಪಿದರೆ ಲಗ್ನ ನಿಶ್ಚಯವಾಗುತ್ತದೆ."

ದ್ಯಾವಪ್ಪ ಜೋರಾಗಿ ನಕ್ಕ. ಅವನು ನಕ್ಕ ಕಾರಣ ನಾಗಯ್ಯನಿಗೆ ಗೊತ್ತಾಗಲಿಲ್ಲ. ಪಾಪ! ಗೊತ್ತಾಗುವುದಾದರೂ ಹೇಗೆ? ನಾಗಯ್ಯ ತಿರುಗಿ ಹೇಳಿದ, "ನೀನು ಒಪ್ಪಿದರೆ ಲಗ್ನ ನಿಶ್ಚಯವಾದ ಹಾಗೆ."

ಮಾತು ಅರ್ಥವಾದರೂ ಯುಕ್ತಿ ಹುಡುಕುವವನಂತೆ ದ್ಯಾವಪ್ಪ ಕೇಳಿದ, "ಹೆಣ್ಣನ್ನೇನೋ ನೀನು ತಿಳಿಸಿದೆ. ವರನ ಹೆಸರನ್ನು ತಿಳಿಸದೆ ನನ್ನ ಒಪ್ಪಿಗೆಯನ್ನು ಕೇಳುತಿರುವಿ. ನನಗೆ ಪುಸ್ತಕದ ಬದನೇಕಾಯಿಯ ಜ್ಞಾನವಿದೆಯೇ ವಿನಾ ಹಿತ್ತಲಿನ ಬದನೇಕಾಯಿಯ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ಕೊಡಲಾರೆ. ಇಂಥ ವಿಚಾರಗಳಲ್ಲಿ ನನಗೆ ಹೆಚ್ಚು ಪರಿಶ್ರಮವಿಲ್ಲ."

ದ್ಯಾವಪ್ಪನ ಮಾತನ್ನು ಕೇಳಿ ಮೂಕನಂತೆ ನಾಗಯ್ಯ ಅವನ ಮುಖ ನೋಡುತ್ತಾ ಕುಳಿತ. ದ್ಯಾವಪ್ಪನೂ ಸುಮ್ಮನಿದ್ದ. ಸ್ವಲ್ಪ ಸಮಯದ ತರುವಾಯ ನಾಗಯ್ಯ ಹೇಳಿದ, "ನನ್ನ ಮಾತೇ ನಿನಗೆ ಅರ್ಥವಾಗಲಿಲ್ಲವೋ ಅಥವಾ ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲವೋ?"

ಬಹುಶಃ ಎರಡೂ ಸರಿಯಿರಬಹುದು. ಒಬ್ಬರನ್ನೊಬ್ಬರು ತಿಳಿಯದೆ ಇರುವುದು ತಪ್ಪಲ್ಲ; ಆದರೆ ತಪ್ಪಾಗಿ ತಿಳಿಯಬಾರದು" ದ್ಯಾವಪ್ಪನೆಂದ.

ಸ್ಪಷ್ಟವಾಗೆ ಒಡೆದು ನಾಗಯ್ಯ ಹೇಳಿದ, "ಬೇರೆ ಗಂಡುಗಳನ್ನು ವಿಚಾರಿಸಲು ನಾನು ನಿನ್ನ ಹತ್ತಿರ ಬರಲಿಲ್ಲ. ನಿನಗೆ ಕೊಡಬೇಕೆಂದು ಕೃಷ್ಣಪ್ಪಗೌಡರ ಇರಾದೆ."

ಈ ಸಾರಿ ದ್ಯಾವಪ್ಪನ ಮುಖ ಅರಳಿತು. ಬಾಯಿಂದ ಮಾತು ಹೊರಡಲಿಲ್ಲ. ನಾಗಯ್ಯ ತನ್ನ ಮಾತನ್ನೇ ಮುಂದುವರಿಸಿದ, "ನೀನು

ಒಪ್ಪುವದಾದರೆ ಬರುವ ಬಹುಳದ ಒಳಗೆ ಲಗ್ನವನ್ನು ಮಾಡುವ ಮನಸ್ಸಿನಲ್ಲಿ ಇದಾರೆ."

ಕುರ್ಚಿಗೆ ಒರಗಿ ಕುಳಿತವನು ನೆಟ್ಟಗೆ ಕುಳಿತುಕೊಳ್ಳುತ್ತಾ ದ್ಯಾವಪ್ಪ ಅಂದ, "ನಮ್ಮ ಜನರ ಸ್ಥಿತಿ ನೋಡಿ ನನಗೆ ತುಂಬಾ ದುಃಖವಾಗುತ್ತದೆ. ಮದುವೆ ನಮ್ಮ ಜೀವಮಾನದಲ್ಲಿ ದೊಡ್ಡ ಪರಿಣಾಮಕಾರಿಯಾದ ಘಟನೆ ನಿಜ. ಆದರೆ ನಾವು ಅದರ ನಿಜವಾದ ಯೋಗ್ಯತೆಗಿಂತ ಹೆಚ್ಚು ಮಹತ್ವ ಕೊಟ್ಟಿದ್ದೇವೆ. ಪ್ರೇಮಕ್ಕೆ ಪ್ರಧಾನತೆಯನ್ನು ಕೊಟ್ಟಿರುವ ಸಮಾಜಗಳೇ ಮದುವೆಗೆ ಹೆಚ್ಚು ಮಹತ್ವ ಕೊಟ್ಟಿಲ್ಲ. ಹಿಂದೂ ಸಮಾಜದಲ್ಲಿ ಮದುವೆಯು ಸಂಸ್ಕಾರ ಒಂದು ಕರ್ತವ್ಯಮಾತ್ರ. ಆದರೂ ನಮ್ಮಲ್ಲಿ ಮದುವೆಗಾಗಿ ಎಷ್ಟೋ ಅನರ್ಥಗಳಾಗುತ್ತವೆ."

ಇವನ ಮಾತುಗಳೊಂದೂ ನಾಗಯ್ಯನಿಗೆ ಅರ್ಥವಾಗಲಿಲ್ಲ. ಮತ್ತು ಬೇಕಿರಲಿಲ್ಲ. ಅವನು ಹೇಳಿದ, "ಮೊದಲಿನ ದ್ಯಾವಪ್ಪನಲ್ಲ ಎಂದು ನನಗೆ ಚೆನ್ನಾಗಿ ಗೊತ್ತಿತ್ತು. ಈಗ ನೋಡಿದರೆ ನಾನು ಯೋಚಿಸಿರುವುದಕ್ಕಿಂತಲೂ ಅಸಾಧ್ಯವಾಗಿ ಕಾಣುತಿರುವೆ. ಮದುವೆಯ ಉದ್ದೇಶದ ಚರ್ಚೆಗೆ ನಾನೀಗ ಬಂದಿಲ್ಲ. ನೀನು ಯೋಗ್ಯನಾದ ವರ ಎಂದು ನಾವು ಮದುವೆಯ ಪ್ರಸ್ತಾಪವನ್ನು ತೆಗೆದುಕೊಂಡು ಬಂದಿದ್ದೇವೆ. ಹುಡುಗಿಯ ವಿಚಾರ ನಿನಗೆ ತಿಳಿದೇ ಇದೆ. ಪ್ರತಿಯೊಂದು ವಿಧದಲ್ಲಿಯೂ ಆಕೆ ನಿನಗೆ ಯೋಗ್ಯಳು. ಇಷ್ಟುಮಾತ್ರ ಹೇಳಬಲ್ಲೆ."

"ನಾನು ಆ ವಿಚಾರವನ್ನೇ ಹೇಳಲು ಹೊರಟಿದ್ದೆ. ಪರೀಕ್ಷೆ ಪಾಸು ಮಾಡಿದ ತಕ್ಷಣ ವರ ಯೋಗ್ಯನೆಂದು ಭಾವಿಸುತ್ತಾರೆ. ಪರೀಕ್ಷೆ ಪಾಸು ಮಾಡಿದ ಮಾತ್ರಕ್ಕೆ ನೌಕರಿ ಸಿಗುವುದಿಲ್ಲ. ಪುಸ್ತಕದ ಪರೀಕ್ಷೆ ಪಾಸು ಮಾಡಿದ ಮೇಲೆಯೇ ಜೀವನದ ನಿಜವಾದ ಪರೀಕ್ಷೆ ಪ್ರಾರಂಭವಾಗುವುದು. ನಾನು ಪಾಸುಮಾಡಿರುವುದು ಸಿದ್ಧಾಂತ ಪರೀಕ್ಷೆ. ಪ್ರಯೋಗಪರೀಕ್ಷೆ ಇನ್ನು ಪ್ರಾರಂಭವಾಗುವುದು. ಅದು ಇನ್ನೂ ಪ್ರಾರಂಭವಾಗಿಲ್ಲ" ಎಂದು ದ್ಯಾವಪ್ಪ ಹೇಳಿದ.

ಬರುಬರುತ್ತಾ ದ್ಯಾವಪ್ಪನ ಮಾತೆಲ್ಲ ನಾಗಯ್ಯನಿಗೆ ಪುರಾಣವಾಗುತ್ತಾ ಬಂತು. ಈ ಸಿದ್ಧಾಂತ ಪರೀಕ್ಷೆ ಏನು? ಪ್ರಯೋಗ ಪರೀಕ್ಷೆ

ಏನು ? ಪ್ರಪಂಚದಲ್ಲಿ ಮದುವೆ ನಡೆಯುವುದು ವಾಡಿಕೆ. ಹೆಣ್ಣು ಗಂಡು ಎಂದಮೇಲೆ ಮದುವೆ ಸ್ವಾಭಾವಿಕ. ಇನ್ನು ಶ್ರೀಮಂತರು ಕರೆದು ಹೆಣ್ಣು ಕೊಡುವಾಗ ಗೊಣಗಾಟವೇನು ?

ಓದಿದವರು ಮದುವೆಯಲ್ಲಿ ಹಣ ಕೇಳುವುದು ಸಾಧಾರಣ. ಇವನ ಪುರಾಣದ ಉದ್ದೇಶ ಆ ಕಡೆಗೆ ಇರಬಹುದೆಂಬ ಸಂಶಯ ಹುಟ್ಟಿತು. ಅದನ್ನು ನಿವಾರಿಸಿಕೊಳ್ಳಲು ಹೇಳಿದ, "ನಿನ್ನ ಸಿದ್ಧಾಂತ ಪ್ರಯೋಗ ಗಳೊಂದೂ ನನಗೆ ಬೇಡ. ಆಳು ಮನಸ್ಸಿನಲ್ಲಿ ನೀನು ಯೋಚಿಸುತ್ತಿರು ವುದನ್ನು ಈಗ ನೋಡುತಿದ್ದೇನೆ. ನೀನು ಮುಂಚಿನ ದ್ಯಾವಪ್ಪನಲ್ಲ."

"ನಿನ್ನ ಮಾತು ನಿಜ. ಮೊದಲು ನಾನು ಹೀಗೆ ಯೋಚಿಸುತ್ತಿರ ಲಿಲ್ಲ. ಸುಖಬರಲಿ, ದುಃಖಬರಲಿ ಸಹಿಸುತಿದ್ದೆ. ಈಗ ಹಾಗಲ್ಲ."

"ಈಗ ನಿನಗಿರುವ ತೊಂದರೆ ಏನು ? ಬೇಕಾದರೆ ನೌಕರಿ ಮಾಡು, ಇಲ್ಲದಿದ್ದರೆ ಓದಲು ಹೋಗು. ಇಂಗ್ಲೇಂಡಿಗೆ ಬೇಕಾದರೂ ನಿನ್ನನ್ನು ಕಳು ಹಿಸಿಕೊಡುತ್ತಾರಂತೆ.''

"ನನ್ನ ವಿಚಾರ ಇನ್ನೂ ಅರ್ಥಮಾಡಿಕೊಂಡಿಲ್ಲ. ರೈತನಾಗಿ ಬಾಳಲೇ ; ಸರಕಾರಿ ಕೆಲಸಕ್ಕೆ ಸೇರಲೇ ; ಡಾಕ್ಟರು ಇತ್ಯಾದಿ ಕಸುಬನ್ನು ಕಲಿಯಲೇ ಎಂದು ಯೋಚಿಸುತಿದ್ದೇನೆ. ನನಗೆ ಲಾಯರಾಗಲಿ, ಡಾಕ್ಟರಾ ಗಲಿ ಆಗಲು ಮನಸ್ಸಿಲ್ಲ. ಲಾಯರು ಡಾಕ್ಟರು ಸಮಾಜಕ್ಕೆ ಅಗತ್ಯವಾಗಿ ಬೇಕಾದವರು ನಿಜ. ಆದರೆ ನಾವು ರೈತರು. ನಮ್ಮ ಸ್ವಭಾವ ಯಾವಾ ಗಲು ಲಾಭೋತ್ಪಾದಕ ಪದಾರ್ಥಗಳಿಂದ ಸಮಾಜದ ಸಂಪತ್ತನ್ನು ಹೆಚ್ಚಿಸುವುದು. ಅದಕ್ಕೆ ಸಂಬಂಧಪಟ್ಟ ಯಾವುದಾದರೂ ಕಸಬನ್ನು ಕೈಗೊಳ್ಳಬೇಕೆಂದು ನನ್ನ ಆಶೆ. ಅದು ಎಷ್ಟು ಸಾಧ್ಯವೋ ಈಗ ಹೇಳಲು ಆಗದು. ಇಂಥಾ ವಿಚಾರಗಳಲ್ಲಿ ಸರಿಯಾದ ಸಲಹೆ ಕೊಡುವವರು ನಮಗೆ ಯಾರೂ ಇಲ್ಲ, ಹೆಣ್ಣುಕೊಡಲು ಮುಂದೆ ನುಗ್ಗಿ ಬರುತ್ತಾರೆ. ಸರಿಯಾದ ಮಾರ್ಗ ಒಂದನ್ನು ಹಿಡಿಯುವ ಮೊದಲು ನಾನು ಮದುವೆಯಾಗುವುದಿಲ್ಲ.

ದ್ಯಾವಪ್ಪನ ಸ್ವಭಾವವನ್ನು ತಿಳಿದ ನಾಗಯ್ಯ ಮುಂದೆ ಮಾತನ್ನು ಬೆಳೆಸಲಿಲ್ಲ.

## ೧೬. ಅದೇ ಉತ್ತಮ ಮಾರ್ಗ

ಹಳ್ಳಿಗೆ ಬಂದ ಮಾರನೆಯ ದಿನ ಪಾದರಿಯವರ ಮನೆಗೆ ಹೋಗುವ ವಾಡಿಕೆ ಡ್ಯಾಪಪನಿಗೆ. ಈ ಸಾರಿ ನಾಲ್ಕೈದು ದಿನವಾದರೂ ಪಾದರಿಯವರ ಮನೆಗೆ ಹೋಗಿರಲಿಲ್ಲ. ಡ್ಯಾವಪ್ಪ ಮೊದಲನೆಯ ದರ್ಜೆಯಲ್ಲಿ ಉತ್ತೀರ್ಣನಾದ ವಿಚಾರ ಅವರಿಗೆ ತಿಳಿದಿತ್ತು. ಅವನನ್ನು ನೋಡಲು ಪಾದರಿಯವರು ತುಂಬಾ ಆಶೆಯಿಂದ ಇದ್ದರು. ಡ್ಯಾವಪ್ಪ ಮಾತ್ರ ಅವರ ಮನೆಯ ಕಡೆ ಮುಖಹಾಕಲಿಲ್ಲ. ಅವನು ಬರುವ ಹಾದಿಯನ್ನು ಕಾದು ಕೊನೆಗೆ ತಮ್ಮ ಮಗನನ್ನು ಅವನ ಹತ್ತಿರ ಕಳುಹಿಸಿದರು.

ಡ್ಯಾವಪ್ಪ ಅದೇ ದಿನ ಮಧ್ಯಾಹ್ನ ಪಾದರಿಯವರ ಮನೆಗೆ ಹೋದ.

ಪಾದರಿಗಳು ಅತ್ಯಂತ ಆದರ ವಿಶ್ವಾಸಗಳಿಂದ ಅವನನ್ನು ಸತ್ಕರಿಸಿ ಹೇಳಿದರು, "ನೋಡು ಡ್ಯಾವಪ್ಪ, ಇಂದು ಸಮಾಜದಲ್ಲಿ ನೀನು ಒಬ್ಬ ಗಣ್ಯವ್ಯಕ್ತಿ. ನಿಮ್ಮ ಅಣ್ಣನ ಹತ್ತಿರ ಹಣವಿದೆ; ಆಸ್ತಿ ಇದೆ. ಏನು ಪ್ರಯೋಜನ? ತಾವು ಕಷ್ಟಪಟ್ಟು ದುಡಿದು ಇತರರಿಗೆ ತಿನ್ನಿಸುತ್ತಾರೆ. ಸರಕಾರಿ ಅಧಿಕಾರಿಗಳನ್ನು ನೋಡಿದರೆ ಹೆದರುವರು."

"ತಾವು ಹೇಳುವುದು ಸರಿ; ಮನುಷ್ಯರಿಗೆ ಸಂಪತ್ತು ಜೀವನದ ಧ್ಯೇಯವಲ್ಲ, ಜ್ಞಾನವೆ ಚರಮ ಧ್ಯೇಯ. ಅಂದಮಾತ್ರಕ್ಕೆ ಸಂಪತ್ತನ್ನು ತಿರಸ್ಕರಿಸಬಾರದು, ಜ್ಞಾನಾರ್ಜನೆಗೆ ಸಂಪತ್ತು ಸಹಕಾರಿ."

ನಿಂತುಕೊಂಡು ಮಾತನಾಡುತಿದ್ದ ಪಾದರಿಗಳು ಜೋರಾಗಿ ನಕ್ಕರು. ಡ್ಯಾವಪ್ಪನ ಹತ್ತಿರಬಂದು ಅವನ ಭುಜ ತಟ್ಟುತ್ತಾ ಹೇಳಿದರು, "ಭೇಷ್ ನಾನು ನಿನ್ನ ಮಾತು ಒಪ್ಪಿದೆ. ಜ್ಞಾನವೂ ಬೇಕು ಸಂಪತ್ತೂ ಬೇಕು. ಆದ್ದರಿಂದ ಎಲ್ಲಾ ವಿದ್ಯಾವಂತರಾಗಬೇಕು. ನಿನ್ನನ್ನು ನೋಡಿ ಹಳ್ಳಿಯವರು ಬುದ್ಧಿ ಕಲಿಯಲಿ. ನೀನು ಉತ್ತಮ ದರ್ಜೆಯಲ್ಲಿ ಉತ್ತೀರ್ಣನಾದ ವಿಚಾರ ತಿಳಿದು ತುಂಬಾ ಸಂತೋಷವಾಯಿತು."

ಸ್ವಲ್ಪ ಮಾತುಕಥೆ ಬೆಳೆದ ತರುವಾಯ ಪಾದರಿಯವರು ಹೇಳಿದರು, " ಮುಂದೆ ಏನುಮಾಡಬೇಕೆಂದಿರುವಿ ?''

ಆ ಹಳ್ಳಿಗಾಡು ಪ್ರದೇಶದಲ್ಲಿ ಈ ಪ್ರಶ್ನೆ ಕೇಳಿದವರು ಇವರೊಬ್ಬರೇ. ಕೆಲವರು ಹೆಣ್ಣುಕೊಡಲು ಮುಂದೆಬಂದರು, ಹಲವರು ಅಮುಲ್ದಾರನಾಗುವನೆಂದು ಆದರದಿಂದ ಗೌರವಿಸಿದರು.

ಅದನ್ನೇ ದ್ಯಾವಪ್ಪ ಹತ್ತಾರುಸಾರಿ ಮನಸ್ಸಿನಲ್ಲಿ ತಿರುವಿಹಾಕುತ್ತಾ ಹೇಳಿದ, " ಮುಂದೆ ಏನುಮಾಡಲಿ ? ಎಂದು ಯೋಚಿಸುತಿದ್ದೇನೆ.''

'' ಸರಕಾರದವರು ಅಮುಲ್ದಾರರಾಗಿ ತೆಗೆದುಕೊಳ್ಳುತ್ತಾರೆಂದು ಇಲ್ಲಿ ಜನರು ಹೇಳುತಿದ್ದಾರೆ."

'' ಹಳ್ಳಿಯವರಿಗೆ ಗೊತ್ತಿರುವುದು ಎರಡು ಮೂರು ನೌಕರಿ. ಅವರಿಗೆ ಪ್ರಿಯವಾದ್ದು ಅದು. ಅಮುಲ್ದಾರರು, ಡೆಪ್ಯೂಟಿಕಮಿಷನರು, ಪೋಲೀಸ್ ಇನ್‌ಸ್ಪೆಕ್ಟರು. ಸ್ಕೂಲು ಕಾಲೇಜುಗಳಲ್ಲಿ ಉಪಾಧ್ಯಾಯನಾಗಿ ಕೆಲಸಮಾಡುವುದೂ ಅವರಿಗೆ ರುಚಿಸದು. ಇದುವರೆಗೆ ನಾನು ಯಾವುದನ್ನೂ ನಿರ್ಧಾರಮಾಡಿಲ್ಲ. ಪ್ರಯತ್ನಪಟ್ಟರೆ ಯಾವುದರಲ್ಲಾದರೂ ಪ್ರೊಫೆಸರನ್ನಾಗಿ ತೆಗೆದುಕೊಳ್ಳಬಹುದು..''

'' ಸರಿ, ನಿನಗೆ ಯಾವುದು ಇಚ್ಛೆಯೋ ಅದನ್ನು ಮಾಡು. ಎರಡನೆಯದಾಗಿ ಕಾಲ, ದೇಶ, ಪರಿಸ್ಥಿತಿಯನ್ನು ನೋಡಬೇಕು. ನಮ್ಮ ಜನರಿಗೆ ಪೋಲೀಸ್ ಇನ್‌ಸ್ಪೆಕ್ಟರು, ಅಮುಲ್ದಾರರು, ಮ್ಯಾಜಿಸ್ಟ್ರೇಟರು, ಲಾಯರು ಇವರ ಪರಿಚಯ ಚೆನ್ನಾಗಿದೆ. ಆದ್ದರಿಂದ ತಮ್ಮ ಮಕ್ಕಳು ಓದಿ ಮುಂದಕ್ಕೆ ಬಂದಾಗ ಇವುಗಳಲ್ಲಿ ಯಾವುದಾದರೂ ಒಂದು ಉದ್ಯೋಗಮಾಡಲಿ ಎಂದು ಅವರಿಗೆ ಇಚ್ಛೆ. ಪಾಪ! ಮಕ್ಕಳಿಗೆ ಸರಿಯಾದ ಸಲಹೆ ಕೊಡಲಾರರು.

ತನ್ನ ಮನಸ್ಸಿನ ಸಂಕಟ ತನ್ನ ಮುಂದೆ ಪ್ರತಿಬಿಂಬಿಸಿತು. ಅವನು ಹೇಳಿದ, " ಹಳ್ಳಿಯ ವಿಚಾರ ನಿಮಗೆ ಚೆನ್ನಾಗಿ ಗೊತ್ತಿದೆ. ಅಮುಲ್ದಾರರಾಗಲಿ. ಮ್ಯಾಜಿಸ್ಟ್ರೇಟರಾಗಲಿ, ಆಗಲು ನನಗೆ ಇಚ್ಛೆಯಿಲ್ಲ. ಅಧಿಕಾರ ತೋರಿಸುತ್ತಾ ದರ್ಪದಿಂದ ಇರಬಹುದು. ಅದು ನನ್ನಿಂದಾಗದು. ದೇಶದ ಉನ್ನತಿಗೆ ಕಾರಣವಾದ ಯಾವುದಾದರೂ ಒಂದು ಉದ್ಯೋಗ ಮಾಡಬೇಕೆಂದು ನನ್ನ ಬಯಕೆ."

“ಈ ತರದ ಅಭಿಪ್ರಾಯ ಉಳ್ಳವರಲ್ಲಿ ನೀನೇ ಮೊದಲನೆಯವನು. ಜನರು ಅಧಿಕಾರ, ಹಣಕ್ಕೆ ಬಿದ್ದು ಸಾಯುತ್ತಾರೆ. ಪ್ರಪಂಚದ ಇತರ ದೇಶಗಳನ್ನು ನೋಡು ಜನರು ಸಂಪತ್ತನ್ನು ಅಭಿವೃದ್ಧಿಪಡಿಸಿ, ಜನರ ಜೀವನದ ಮಟ್ಟವನ್ನು ಹೆಚ್ಚಿಸಲು ವ್ಯಾಪಾರ, ಕೈಗಾರಿಕೆಯಲ್ಲಿ ನಿಪುಣತೆಯನ್ನು ಹೊಂದುವುದಕ್ಕೆ ವಿದೇಶಗಳಿಗೆ ಹೋಗುತ್ತಾರೆ. ನಮ್ಮಲ್ಲಿ ಹಾಗಲ್ಲ, ಬ್ಯಾರಿಸ್ಟರಾಗುವುದಕ್ಕೋಸ್ಕರ ಅಥವಾ ಬಿ. ಎ. ಓದುವುದಕ್ಕೋಸ್ಕರ ಇಂಗ್ಲೆಂಡಿಗೆ ಹೋಗುತ್ತಾರೆ. ನಮ್ಮಲ್ಲಿ ಲಾ ಕಾಲೇಜುಗಳಿಲ್ಲವೆ? ನಮ್ಮ ದೇಶದ ಕಾಲೇಜುಗಳಲ್ಲಿ ಬಿ. ಎ. ಮತ್ತು ಎಂ. ಎ. ಕಲಿಸಿಕೊಡ.ವದಿಲ್ಲವೆ? ನೀನು ಯಾವುದಾದರೂ ಕೈಗಾರಿಕೆಯಲ್ಲಿ ನಿಪುಣತೆಯನ್ನು ಹೊಂದಲು ಜರ್ಮನಿ ಅಥವಾ ಅಮೆರಿಕಾಕ್ಕೆ ಹೋಗು. ನನಗೆ ಅನೇಕ ಮಂದಿ ರೆವೆರೆಂಡರ ಪರಿಚಯವಿದೆ. ಅವರ ಮೂಲಕ ನಿನಗೆ ಬೇಕಾದ ಸಹಾಯ ಮಾಡಿಸುತ್ತೇನೆ.''

ಪಾದರಿಯವರ ಮಾತು ಕೇಳಿ ದ್ಯಾವಪ್ಪನಿಗೆ ಮನಸ್ಸಿನ ಅಶಾಂತಿ ಕಡಿಮೆಯಾಯಿತು. ನನ್ನ ಹಾಗೆ ಯೋಚನೆಮಾಡುವವರೂ ಇದಾರೆ ಎಂದು ಅವನಿಗೆ ಸ್ವಲ್ಪ ಸಮಾಧಾನ. ಅಮೆರಿಕಾ ಜರ್ಮನಿಗೆ ಹೋಗುವ ವಿಚಾರವೇನೊ ಉತ್ತಮವಾದ್ದು. ಸಾವಿರಾರು ರೂಪಾಯಿ ಖರ್ಚುಮಾಡುವ ಶಕ್ತಿ ತನ್ನಲ್ಲಿ ಇದೆಯೋ ಎಂಬ ಯೋಚನೆ ಬಂತು. ಹೇಳಿದ. “ಆಕಾಶಕ್ಕೆ ಏಣಿ ಹಾಕುವ ಯೋಚನೆ ಮಾಡುತಿದ್ದೇನೆ.”

ಪಾದರಿಯವರಿಗೆ ಸರಿಯಾಗಿ ಅರ್ಥವಾಗಲಿಲ್ಲ. ಇವನ ಮುಖವನ್ನೇ ನೋಡಿದರು.

“ಅಮೆರಿಕಾ ಜರ್ಮನಿ ಇತ್ಯಾದಿ ದೇಶಗಳ ವಿಚಾರ ಬೇಕಾದಷ್ಟು ಮಾತನಾಡಬಹುದು. ಅಲ್ಲಿಗೆ ಹೋಗಲು ಹಣಬೇಕಲ್ಲ ?” ದ್ಯಾವಪ್ಪ ಎಂದ.

ತಮ್ಮ ತಲೆಯಮೇಲೆ ಕೈಯಾಡಿಸುತ್ತಾ ಪಾದರಿಯವರು ಸ್ವಲ್ಪ ಹೊತ್ತು ಯೋಚಿಸಿ ಹೇಳಿದರು, “ನಿಮ್ಮ ಅಣ್ಣ ಸ್ವಲ್ಪ ಸಹಾಯ ಮಾಡಬಹುದು. ಸರಕಾರದಿಂದ ಸ್ವಲ್ಪ ಸಹಾಯ ಪಡೆಯಲು ಪ್ರಯತ್ನಪಡಬಹುದು. ಕೃಷ್ಣಪ್ಪಗೌಡರು ತಮ್ಮ ಮಗಳನ್ನು ಕೊಡುತ್ತಾರಂತೆ. ಅವರೇ

ನಿನ್ನನ್ನು ವಿದೇಶಕ್ಕೆ ಕಳುಹಿಸಬಹುದು. ಬೇಕಾದರೆ ನಾನು ಅವರಿಗೆ ಹೇಳುತ್ತೇನೆ. ನನ್ನ ಮಾತನ್ನು ಅವರು ತೆಗೆಯುವುದಿಲ್ಲ."

ದ್ಯಾವಪ್ಪನಿಗೆ ನಗು ಬಂತು. ಪಾದರಿಯವರ ಕಣ್ಣಿಗೆ ಬೀಳದ ರೀತಿಯಲ್ಲಿ ತಡೆದ. ಮಾತು ಕಿವಿಗೆ ಬಿದ್ದಮೇಲೆ ಉತ್ತರ ಕೊಡಬೇಕು. ಹೇಳಿದ, "ಜನರು ಹಾಗೆ ಅಂದುಕೊಳ್ಳುತ್ತಾರೆ. ಇದು ಸ್ವಾಭಾವಿಕ. ನಮಗೂ ಅವರಿಗೂ ಮದುವೆಯ ವಿಚಾರದಲ್ಲಿ ಯಾವ ಮಾತುಕಥೆ ನಡೆದಿಲ್ಲ. ಹೆಣ್ಣನ್ನು ಕೊಡುವ ಪ್ರಸ್ತಾಪವನ್ನು ಕಳುಹಿಸಿದ್ದರು. ಅದಕ್ಕೆ ಉತ್ತರವನ್ನೂ ಕಳುಹಿಸಲಿಲ್ಲ."

"ಒಪ್ಪಿಗೆ ಕಳುಹಿಸುವುದೇನು ದೊಡ್ಡ ಕೆಲಸ. ಒಪ್ಪಿ ಮದುವೆ ಮಾಡಿಕೊ, ತರುವಾಯ ವಿದೇಶಕ್ಕೆ ಹೋಗಬಹುದು"

"ಹಣಕ್ಕಾಗಿ ಮದುವೆಯಾಗಲು ನಾನು ಬಯುಸುವುದಿಲ್ಲ."

"ಅದು ನ್ಯಾಯ. ಅವರೇ ಕೊಡುವಾಗ ತಗೆದುಕೊಂಡು ವಿದ್ಯಾಭ್ಯಾಸಕ್ಕೋಸ್ಕರ ಖರ್ಚು ಮಾಡುವುದರಲ್ಲಿ ಅಧರ್ಮವೇನೂ ಕಾಣಿಸುವುದಿಲ್ಲ."

ನನ್ನನ್ನು ನೋಡಿ ಅವರು ಸಂಬಂದ ಬೆಳೆಸಲು ಮುಂದೆ ಬರಲಿಲ್ಲ, ದೊಡ್ಡ ನೌಕರಿ ಸಿಗುವದೆಂದು ಬಂದಿದಾರೆ. ಯಾವುದಾದರೂ ನೌಕರಿಗೆ ಸೇರಲಿ ಎಂದು ಹೇಳುವ ಪಂಗಡಕ್ಕೆ ಸೇರಿದವರು. ಇಂಥ ವಿಚಾರಗಳು ಅವರ ಮನಸ್ಸಿಗೆ ಹಿಡಿಯುವುದಿಲ್ಲ. ಯಾವುದಾದರೂ ಕೈಗಾರಿಕೆಯಲ್ಲಿ ಪ್ರವೀಣತೆಯನ್ನು ಹೊಂದಲು ವಿದೇಶಕ್ಕೆ ಹೋಗುತ್ತೇನೆಂದು ಹೇಳಿದರೆ ಅವರಿಗೆ ಗೊತ್ತಾಗುವುದಿಲ್ಲ. ಈಗ ನಾನು ಒಂದು ರೀತಿಯಲ್ಲಿ ಸ್ವತಂತ್ರನಾಗಿದ್ದೇನೆ. ಹಣ ಸಿಗುತ್ತದೆ ಎಂಬ ಆಶೆಯಿಂದ ಮದುವೆಯಾದ ಮೇಲೆ ಕೈಗಾರಿಕೆ ಕಲಿಯುವುದು ಬೇಡ ಎಂದು ಹೇಳಿದರೆ ಏನು ಮಾಡಲಿ? ನಾನು ಈಗ ಮದುವೆಯಾಗುವುದಿಲ್ಲ."

"ನಿಮ್ಮಣ್ಣನನ್ನು ವಿಚಾರಿಸು ಏನು ಹೇಳುತ್ತಾರೆ ನೋಡೋಣ."

"ಅದೇ ಉತ್ತಮ ಮಾರ್ಗ."

---

## ೧೭: ರೈತರಿಗೆ ವಿದ್ಯೆಮುಖ್ಯ

ದ್ಯಾವಪ್ಪ ಇನ್ನು ಹೊನ್ನುಗದ್ದೆಯಲ್ಲಿದ್ದ. ಯಾವುದನ್ನೂ ನಿಶ್ಚೈಸಿರಲಿಲ್ಲ. ಗೆಜೆಟ್ಟಿನಲ್ಲಿ ಪ್ರಕಟಣೆಯೊಂದನ್ನು ನೋಡಿದ. ಪ್ರಕಟಣೆ ಇದು :

"ಕೈಗಾರಿಕೆಯಲ್ಲಿ ಉಚ್ಚಶಿಕ್ಷಣವನ್ನು ಹೊಂದಲು ವಿದೇಶಕ್ಕೆ ಒಬ್ಬರನ್ನು ಕಳುಹಿಸಲಾಗುವುದು. ಹೋಗಲು ಬಯಸುವವರು ಈ ತಿಂಗಳ ಕೊನೆಯೊಳಗೆ ಅರ್ಜಿ ಹಾಕಿಕೊಳ್ಳಬೇಕು. ಅರ್ಜಿಯಲ್ಲಿ ಯೋಗ್ಯತೆ ಅಲ್ಲದೆ ಅವರ ನಡತೆ, ವಿದ್ಯಾಭ್ಯಾಸ ಮಾಡಿದ ರೀತಿ ಇವುಗಳ ವಿವರಣೆ ಸಂಕ್ಷೇಪದಲ್ಲಿ ನಮೂದಿಸಿರಬೇಕು. ಆರಿಸಿಕೊಂಡವರಿಗೆ ಸರಕಾರದವರು ದ್ರವ್ಯಸಹಾಯ ಮಾಡುತ್ತಾರೆ.''

ಇದನ್ನು ಓದಿ ದ್ಯಾವಪ್ಪನಿಗೆ ಆನಂದವಾಯಿತು. ಆದರೆ ಆ ಆನಂದ ಹೆಚ್ಚುಕಾಲವಿರಲಿಲ್ಲ. ತನ್ನನ್ನು ಮೀರಿಸುವ ಯೋಗ್ಯತೆಯವರು ಎಷ್ಟೋ ಮಂದಿ ಇರುವಾಗ ತನಗೆ ಸಿಗುವುದಿಲ್ಲವೆಂದು ನೆನಸಿದ. ತಾನು ಬಿ.ಎಸ್.ಸಿ. ಪ್ರಥಮಶ್ರೇಣಿಯಲ್ಲಿ ಉತ್ತೀರ್ಣನಾಗಿರುವದು ನಿಜ. ಎಂ.ಎಸ್‌ಸಿ. ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿರುವವರು ಎಷ್ಟುಮಂದಿ ಇಲ್ಲ? ಅವರಿಗೆ ಯೋಗ್ಯತೆಯೊಂದೇ ಅಲ್ಲ, ಅವರ ತಂದೆ ಅಥವಾ ಬಂಧುಬಳಗದವರು ಸರಕಾರದಲ್ಲಿ ದೊಡ್ಡ ಹುದ್ದೆಯಲ್ಲಿರಬಹುದು. ಇಂಥ ಸುಯೋಗವನ್ನು ಯಾರೂ ಬಿಡುವುದಿಲ್ಲ. ತಾನು ಅರ್ಜಿಹಾಕುವುದು ಪ್ರಯೋಜನವಿಲ್ಲ, ಎಂದುಕೊಂಡ. ಪಾದರಿಯವರು ಅಷ್ಟುಬೇಗ ನಿರಾಶರಾಗಲಿಲ್ಲ. ದ್ಯಾವಪ್ಪನ ಅವಸ್ಥೆಯನ್ನು ನೋಡಿ ಹೇಳಿದರು, "ಹಳ್ಳಿಯ ಹುಡುಗರು ಹಳ್ಳಿಯಲ್ಲಿ ಆಶೆ, ಉತ್ಸಾಹಗಳಿಂದ ತುಂಬಿರುತ್ತಾರೆ. ಪಟ್ಟಣಕ್ಕೆ ಹೋಗಿ ಉಚ್ಚಶಿಕ್ಷಣ ಹೊಂದುತ್ತಲೇ ಪ್ರತಿಯೊಂದು ಕೆಲಸದಲ್ಲಿಯೂ ನಿರಾಶರಾಗುತ್ತಾರೆ. ಪ್ರಪಂಚದಲ್ಲಿ ದೊಡ್ಡ ಯುದ್ಧಗಳನ್ನು ಜಯಿಸಿ ವೀರರೆನಿಸಿಕೊಂಡು ರಾಜ್ಯ ಕಟ್ಟಿದವರೆಲ್ಲ ಅನೇಕಸಾರಿ ಸೋತಿರುತ್ತಾರೆ. ಅರ್ಜಿಹಾಕು, ಅದಕ್ಕೆ ಸಂಬಂಧಪಟ್ಟ ವ್ಯಕ್ತಿಗಳನ್ನು ನೋಡು. ಇದರಲ್ಲಿ ತೊಂದರೆ ಏನು? ಒಂದುವೇಳೆ ಸಿಗಲಿಲ್ಲ, ಹಾನಿ ಏನು?"

" ನಿರಾಶನಾಗಲಿಲ್ಲ. ನನಗಿಂತಲೂ ಹೆಚ್ಚು ಯೋಗ್ಯತೆಯುವರು ಇರುವರು. ನನ್ನ ಪ್ರಯತ್ನ ವ್ಯರ್ಥವಾಗಬಹುದು" ಎಂದು ಯೋಚಿಸಿದೆ.

" ಇದೇ ನೀವು ಮಾಡುವ ತಪ್ಪು. ನಿನಗಿಂತಲೂ ಕಡಮೆಯೋಗ್ಯತೆಯುವರು ಅರ್ಜಿಹಾಕಿಕೊಳ್ಳುತ್ತಾರೆ. ಅವರು ನಿರಾಶರಾಗಿರುವುದಿಲ್ಲ. ಪ್ರಯತ್ನಪಡುತ್ತಾರೆ. ಒಂದುವೇಳೆ ಇದು ತಪ್ಪಿದರೂ ಇನ್ನೊಂದಕ್ಕೆ ಮಾರ್ಗವಿರುವುದು."

ದ್ಯಾವಪ್ಪ ಅರ್ಜಿ ಹಾಕಿಕೊಂಡ.

ಅರ್ಜಿಗಳನ್ನು ಪರಿಶೀಲಿಸಿ ಯೋಗ್ಯನಾದವನನ್ನು ಆಯುವುದಕ್ಕೆ ಒಂದು ಕಮಿಟಿ ಏರ್ಪಟ್ಟಿತು. ಆ ಕಮಿಟಿಯ ಮುಂದೆ ಮುನ್ನೂರು ಅರ್ಜಿ ಬಂದವು. ಒಬ್ಬೊಬ್ಬರಲ್ಲಿ ಒಂದೊಂದು ಯೋಗ್ಯತೆ. ಕಮಿಟಿಯುವರು ಅರ್ಜಿಗಳನ್ನು ಪರಿಶೀಲಿಸಿ ನಾಲ್ಕುಮಂದಿಯನ್ನು ಭೇಟಿಗೆ ಕರೆದರು. ಅವರಲ್ಲಿ ದ್ಯಾವಪ್ಪನೊಬ್ಬ.

ಭೇಟಿಗೆ ಮೊದಲು ಬಂದವನು ಐದೂವರೆ ಅಡಿ ಎತ್ತರದ ಆಳು. ಓದಿ ಓದಿ ಮುಖದ ಕಾಂತಿ ಕುಂದಿತ್ತು. ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡಿದ್ದ.

"ನಿಮಗೆ ಯಾವ ಕೈಗಾರಿಕೆ ಗೊತ್ತಿದೆ ?" ಎಂದು ಅಧ್ಯಕ್ಷರು ಕೇಳಿದರು.

ಅದಕ್ಕೆ ಉತ್ತರ ಕೊಡಲು ಯೋಚಿಸುತ್ತಾ ನಿಂತುಕೊಂಡ.

"ನೀವು ಯಾವುದಾದರೂ ಕೈಗಾರಿಕೆ ಸಂಬಂಧಪಟ್ಟ ಯಂತ್ರ ಸಾಮಗ್ರಿಗಳನ್ನು ಮಾಡುವ ವಿಧಾನಗಳನ್ನು ನೋಡಿರುವಿರಾ ?" ಎಂದು ಒಬ್ಬ ಸದಸ್ಯರು ಕೇಳಿದರು.

"ಅನೇಕಸಾರಿ ನೋಡಿದ್ದೇನೆ. ಆದರೆ ಗಮನವಿಟ್ಟು ನೋಡಲಿಲ್ಲ."

"ನಿಮ್ಮ ಕಡೆ ಹೆಚ್ಚಾಗಿ ಬೆಳೆಯುವ ಪೈರು ಯಾವುದು?"

"ಕಬ್ಬು, ರಾಗಿ, ಹರಳು, ಎಳ್ಳು ಇವುಗಳನ್ನು ವಿಶೇಷವಾಗಿ ಬೆಳೆಯುತ್ತಾರೆ."

"ಕಬ್ಬು, ರಾಗಿ ಎರಡೂ ವಿಶೇಷವಾಗಿ ಬೆಳೆಯುತ್ತಾರೆ ಎಂದು ಹೇಳಿದಿರಲ್ಲ, ಎರಡನ್ನೂ ಒಂದೇ ಸ್ಥಳದಲ್ಲಿ ಬೆಳೆಯುತ್ತಾರೋ ?"

"ನಾನು ಹಳ್ಳಿಯಿಂದ ಪಟ್ಟಣಕ್ಕೆ ಬಂದು ಬಹಳ ದಿನಗಳಾದುವು. ಆದ್ದರಿಂದ ಅದರ ವಿಚಾರ ಚೆನ್ನಾಗಿ ಗೊತ್ತಿಲ್ಲ."

ಅಧ್ಯಕ್ಷರು ಕೇಳಿದರು, " ಪೈರಿನ ವಿಚಾರ ನಿಮಗೆ ತಿಳಿಯದು, ಸರಿ. ಕಬ್ಬು ಮತ್ತು ಹರಳಿನ ಗಾಣಗಳನ್ನು ನೀವು ನೋಡಿರುವಿರಾ?"

"ಹೌದು, ನೋಡಿರುವೆನು."

"ಗಾಣದಲ್ಲಿ ಕಬ್ಬಿನರಸ ಎಲ್ಲಿ ಹೇಗೆ ಬೀಳುತ್ತದೆ?" ಹರಳಿನ ಎಣ್ಣೆ ಹೇಗೆ ಬರುತ್ತದೆ?"

"ಕಬ್ಬಿನರಸ ಬರುವಹಾಗೆಯೇ ಎಣ್ಣೆಯೂ ಬೀಳುತ್ತದೆ?"

" ನೀವು ಎಂ. ಎಸ್‌ಸಿ. ಯಲ್ಲಿ ರ‍್ಯಾಂಕ್ ಬಂದಿರುವಿರಿ ಅಲ್ಲವೆ?" ಎಂದು ಎರಡನೆಯ ಸದಸ್ಯರು ಕೇಳಿದರು.

"ಹೌದು"

ಹಿಂದೆ ಇನ್ನು ಯಾವ ಪರೀಕ್ಷೆಗಳಲ್ಲಿ ನಿಮಗೆ ರ‍್ಯಾಂಕ್ ಸಿಕ್ಕಿತ್ತು?''

"ಇಂಟರ್‌ನಲ್ಲಿ ರ‍್ಯಾಂಕ್ ಬಂದಿದೆ. ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಸಂಸ್ಥಾನಕ್ಕೆ ನಾನೇ ಪ್ರಥಮ. ಎಲ್. ಎಸ್. ನಲ್ಲಿಯೂ ನಾನೇ ಪ್ರಥಮ''

"ನಿಮಗೆ ವಿದ್ಯಾರ್ಥಿವೇತನ ದೊರೆಯುತ್ತಿತ್ತೋ?"

"ಹೌದು, ಹೈಸ್ಕೂಲಿನಿಂದ ಹಿಡಿದು ಕಾಲೇಜು ಬಿಡುವವರೆಗೂ ಮೆರಿಟ್ ಸ್ಕಾಲರ್‌ಷಿಪ್ ಸಿಗುತ್ತಿತು."

"ನೀವು ವಿಜ್ಞಾನವನ್ನು ತೆಗೆದುಕೊಂಡ ಉದ್ದೇಶವೇನು?''

"ಜನರ ಲಾಭೋತ್ಪಾದನೆಗೆ ಕೈಗಾರಿಕೆಯೇ ಮುಖ್ಯವಾದ್ದು. ಕೈಗಾರಿಕೆಯಲ್ಲದೆ ವ್ಯವಸಾಯವನ್ನೂ ಲಾಭೋತ್ಪಾದಕ ರೀತಿಯಲ್ಲಿ ವಿಜ್ಞಾನದ ಸಹಾಯದಿಂದ ಬೆಳಸಬಹುದು. ಈಗಿನ ಕಾಲದಲ್ಲಿ ವಿಜ್ಞಾನಕ್ಕೆ ಹೆಚ್ಚು ಮಹತ್ವವಿದೆ. ಆದ್ದರಿಂದ ಅದನ್ನು ತೆಗೆದುಕೊಂಡೆ."

'' ಅಧಿಕ ಲಾಭೋತ್ಪಾದನೆಗೆ ಕೈಗಾರಿಕೆ ಮುಖ್ಯವೇ? ವ್ಯವಸಾಯದಿಂದ ಸಾಧ್ಯವಿಲ್ಲವೆ?"

" ಆಧುನಿಕ ವೈಜ್ಞಾನಿಕ ರೀತಿಯಲ್ಲಿ ವ್ಯವಸಾಯದಲ್ಲಿ ಅಧಿಕ ಲಾಭೋತ್ಪಾದನೆ ಹೊಂದಬಹುದು. ಆದರೆ ಅದಕ್ಕಿಂತಲೂ ಹೆಚ್ಚು ಕೈಗಾರಿಕೆಯಲ್ಲಿ ಹೊಂದಬಹುದು."

ಅಧ್ಯಕ್ಷರು ಕೇಳಿದರು, " ಅಧಿಕ ಲಾಭೋತ್ಪಾದನೆಯೇ ಗುರಿಯಾದರೆ ವ್ಯವಸಾಯ, ಕೈಗಾರಿಕೆಗಳಿಗಿಂತ ವ್ಯಾಪಾರವು ಮುಖ್ಯವಾದುದಲ್ಲವೆ?''

ಉತ್ತರವನ್ನು ಕೊಡದೆ ಆ ಕಡೆ ನೋಡಲು ಪ್ರಾರಂಭಿಸಿದ. ಆಗ ಎರಡನೆಯ ಸದಸ್ಯರು ಕೇಳಿದರು, " ಒಂದೇ ಕೆಲಸವನ್ನು ಒಬ್ಬನು ಮಾಡುತಿದ್ದರೆ ಅದರಲ್ಲಿ ನಿಪುಣತೆ ಸಂಪಾದಿಸಬಹುದು. ಕೆಲಸದಲ್ಲಿ ನಿಪುಣತೆ ಇದ್ದರೆ ನಾಜೂಕಾಗಿ ಅಧಿಕ ಪರಿಮಾಣದಲ್ಲಿ ಸಾಮಾನುಗಳನ್ನು ತಯಾರು ಮಾಡಬಹುದು. ಆದರೆ ಮಹಾತ್ಮಾ ಗಾಂಧಿಯವರು ಎಲ್ಲರಿಗೂ ನೂಲಬೇಕೆಂದು ಹೇಳುತ್ತಾರೆ. ಇವು ಒಂದಕ್ಕೊಂದು ವಿರುದ್ಧವಲ್ಲವೆ?'

" ಹೌದು"

" ಈಗ ನಮ್ಮ ರೈತರಿಗಿರುವ ತೊಂದರೆ ಏನು?'' ಮೊದಲನೆಯ ಸದಸ್ಯರು ಕೇಳಿದರು.

" ರೈತರು ತಾವು ವಾಸಮಾಡುವ ಸ್ಥಳದಲ್ಲಿಯೇ ದನಕರುಗಳನ್ನು ಕಟ್ಟಿಕೊಳ್ಳುತ್ತಾರೆ. ಮಕ್ಕಳನ್ನು ಪಾಠಶಾಲೆಗೆ ಕಳುಹಿಸುವುದಿಲ್ಲ."

" ಉರಿಗಾಂ ಚಿನ್ನದ ಗಣಿಯಲ್ಲಿ ಚಿನ್ನ ತೆಗೆಯಿಸುತಿರುವವರು ಯಾರು?" ಅಧ್ಯಕ್ಷರು ಪ್ರಶ್ನೆ ಹಾಕಿದರು.

" ಮೈಸೂರು ಸರಕಾರದವರು "

" ಮೈಸೂರು ದೇಶದಲ್ಲಿ ಎಲ್ಲರಿಗೂ ವಿದ್ಯುಚ್ಛಕ್ತಿಯನ್ನು ಒದಗಿಸುವವರುಯಾರು? "

" ಮೈಸೂರು ಸರಕಾರದವರು ''

" ಅಂಚೆ ಇಲಾಖೆ ಯಾರ ಆಡಳಿತದಲ್ಲಿದೆ."

" ನಮ್ಮ ದಿವಾನರ ಕೈಯಲ್ಲಿದೆ."

ಈತನನ್ನು ಕಳುಹಿಸಿದರು. ಎರಡನೆಯ ವ್ಯಕ್ತಿ ಬಂತು. ಸುಂದರ ವಾದ ಆಕಾರ. ತುಂಬಿದ ಕೆನ್ನೆ. ನಾಜೂಕಾದ ಉಡುಪು. ನಡೆದುಬರುವ ರೀತಿ ಬಹಳ ಆಕರ್ಷಣೀಯವಾಗಿತ್ತು.

"ಮನುಷ್ಯನಿಗೆ ಇಚ್ಛಾಶಕ್ತಿ ಮುಖ್ಯವೋ ಬುದ್ಧಿ ಶಕ್ತಿ ಮುಖ್ಯವೋ ?" ಮೊದಲನೆಯ ಸದಸ್ಯರು ಕೇಳಿದರು.

"ಇಚ್ಛಾಶಕ್ತಿಯೇ ಮುಖ್ಯ. ಆದುದರಿಂದಲೇ ಮನುಷ್ಯ ಮುಂದಕ್ಕೆ ಬರುತ್ತಾನೆ. ನಮ್ಮ ಮಾವ ಮೊದಲು ಒಬ್ಬ ಸಾಧಾರಣ ಜಮೀನು ದಾರರು. ಅವರು ತಮ್ಮೂರನ್ನು ಬಿಟ್ಟು ಬೆಂಗಳೂರಿಗೆ ಬಂದು ವ್ಯಾಪಾರ ಮಾಡಲು ಪ್ರಾರಂಭಿಸಿ ಸ್ವಲ್ಪ ಸಮಯದಲ್ಲಿಯೇ ಲಕ್ಷಾಂತರ ರೂಪಾಯಿ ಗಳನ್ನು ಸಂಪಾದಿಸಿದರು. ಇದಕ್ಕೆ ಇಚ್ಛಾಶಕ್ತಿಯೇ ಕಾರಣ. ಅವರು ಹಣಸಂಪಾದನೆಯೊಂದೆ ಮಾಡಲಿಲ್ಲ. ಅದೇ ರೀತಿಯಲ್ಲಿ ಸಾರ್ವಜನಿಕ ಕಾರ್ಯಗಳಿಗೆ ದಾನಮಾಡಿರುವರು. ಹೈಸ್ಕೂಲಿಗೆ ಐದು ಸಹಸ್ರ ರೂಪಾಯಿ ಕೊಟ್ಟರು, ಆಸ್ಪತ್ರೆ ಕಟ್ಟಿಸಲು ಎರಡು ಲಕ್ಷ ರೂಪಾಯಿ ಕೊಟ್ಟರು. ಹಾಸ್ಟಲಿಗೆ ಇಪ್ಪತ್ತೈದುಸಾವಿರ ರೂಪಾಯಿ ಕೊಟ್ಟಿರುವರು. ಈಗ ಕಾಲೇಜಿಗೆ ಒಂದು ಲಕ್ಷ ರೂಪಾಯಿಕೊಡಲು ವಾಗ್ದಾನ ಮಾಡಿರುವರು."

"ವ್ಯವಸಾಯ, ಕೈಗಾರಿಕೆ, ವ್ಯಾಪಾರ ಇವುಗಳಲ್ಲಿ ಯಾವುದು ಅಧಿಕ ಲಾಭೋತ್ಪಾದಕವಾದ್ದು ? ಯಾವುದರಿಂದ ನಮ್ಮ ದೇಶ ಮುಂದಕ್ಕೆ ಬರ ಬಹುದು ?"

"ಕಟ್ಟುಕಥೆಯನ್ನಾಗಲಿ, ಸಿದ್ಧಾಂತವನ್ನಾಗಲಿ ನಾನು ಹೇಳುವು ದಿಲ್ಲ. ಪ್ರಯೋಗದ ವಿಚಾರವನ್ನೇ ಹೇಳುವೆನು. ಮೊದಲು ನಮ್ಮ ಮಾವನವರ ಮುಖ್ಯ ಕಸಬು ವ್ಯವಸಾಯ. ಅದರಿಂದ ಮುಂದಕ್ಕೆ ಬರಲು ಸಾಧ್ಯವೇ ಆಗಲಿಲ್ಲ. ವ್ಯಾಪಾರ ಪ್ರಾರಂಭಿಸಿದರು. ದುಡ್ಡಿನ ಮಳೆ ಸುರಿಯಿತು. ಸಂಪಾದಿಸಿದ ಹಣವನ್ನು ತಮಗಾಗಿ ಇಟ್ಟುಕೊಳ್ಳಲಿಲ್ಲ. ದೇಶದ ಉನ್ನತಿಯ ಕಾರ್ಯಗಳಿಗೆ ಕೊಟ್ಟಿರುವರು. ಆದ್ದರಿಂದ ಹಣ ಸಂಪಾ ದಿಸುವುದಕ್ಕೆ ವ್ಯಾಪಾರವೇ ಮುಖ್ಯಸಾಧನ. ವ್ಯಾಪಾರವನ್ನು ಮಾಡು ವುದಕ್ಕೋಸ್ಕರ ಇಂಗ್ಲಿಷಿನವರು ಇಲ್ಲಿಗೆ ಬಂದು ದೇಶವನ್ನೇ ಸಂಪಾದಿಸಿ ದರು. ಈಗ ನಡೆಯುತ್ತಿರುವ ಯುದ್ಧಗಳು ವ್ಯಾಪಾರಕ್ಕಾಗಿ."

" ಕೆಲವು ದೇಶಗಳು ಗೈಗಾರಿಕೆಯಲ್ಲಿ ಮುಂದುವರೆದಿವೆ. ಕೆಲವು ದೇಶಗಳು ಮುಂದುವರಿದಿಲ್ಲ. ಆದ್ದರಿಂದ ಮುಂದುವರಿದ ದೇಶಗಳು ತಮ್ಮಲ್ಲಿ ತಯಾರಾದ ವಸ್ತುಗಳನ್ನು ಮುಂದುವರಿಯದ ದೇಶಗಳಲ್ಲಿ ಮಾರಿ ಹಣ ಸಂಪಾದಿಸುತ್ತಿರುವರು. ಮುಂದುವರಿಯದ ದೇಶಗಳು ಕೈಗಾರಿಕೆಯಲ್ಲಿ ಅಭಿವೃದ್ಧಿ ಹೊಂದಿದರೆ ಇತರ ದೇಶದ ವ್ಯಾಪಾರದ ಮೂಲಕ ಪರದೇಶಗಳಿಗೆ ಹೋಗುತ್ತಿರುವ ಸಂಪತ್ತು ದೇಶದಲ್ಲೇ ನಿಲ್ಲುವುದಲ್ಲವೇ ?''

" ಸಿದ್ಧಾಂತ ರೂಪದಲ್ಲಿ ಸರಿಯಾಗಿ ತೋರಬಹುದು. ವಾಸ್ತವವಾಗಿಯೂ ಆ ರೀತಿ ನಡೆಯುತ್ತಿಲ್ಲ. ನಡೆಯುವುದು ಕಷ್ಟ.''

ಅಧ್ಯಕ್ಷರು ನಗುತ್ತಾ ಕೇಳಿದರು : " ನೀವು ಅರ್ಜಿಹಾಕಿಕೊಂಡಿದ್ದರ ಉದ್ದೇಶವೇನು ? "

" ಕೈಗಾರಿಕೆಯ ವಿದ್ಯೆಯಲ್ಲಿಯೂ ಅದಕ್ಕೆ ಸಂಬಧಪಟ್ಟ ಕಾರಖಾನೆಗಳ ವಿಚಾರದಲ್ಲಿಯೂ ಸಾಧ್ಯವಾದಷ್ಟು ತಿಳಿವಳಿಕೆ ಹೊಂದಲು ವಿದೇಶಕ್ಕೆ ಹೋಗುವುದಕ್ಕೋಸ್ಕರ.''

" ಆ ಕಾರ್ಯವನ್ನು ಸಾಧಿಸಲು ಹೋಗುವವರೇ ಸಾಧ್ಯವಿಲ್ಲವೆಂದು ಹೇಳುವಿರಲ್ಲ ?''

" ಇಡೀ ಹಿಂದೂಸ್ಥಾನಕ್ಕೆ ಸಾಧ್ಯವಾಗದೆ ಇರಬಹುದು. ಕೆಲವು ಸ್ಥಳಗಳಲ್ಲಿ ಏಕೆ ಸಾಧ್ಯವಾಗುವುದಿಲ್ಲ ? ವ್ಯಾಪಾರದಲ್ಲಿ ಎಷ್ಟೋಮಂದಿ ದಿವಾಳಿಯಾಗುತ್ತಾರೆ. ಆದರೆ ನಮ್ಮ ಮಾವ ಅದರಲ್ಲಿಯೇ ಲಕ್ಷಾಂತರಹಣ ಗಳಿಸಿದರು."

" ನಮಗೆ ಸರ್ವಸಮ್ಮತ ಸಿದ್ಧಾಂತ ಮತ್ತು ಪ್ರಯೋಗಬೇಕು."

ಉತ್ತರವಿಲ್ಲ.

" ಯಾವ ತರಗತಿಯಲ್ಲಿ ನೀವು ಬಿ. ಎಸ್‌ಸಿ. ಪಾಸು ಮಾಡಿರುವಿರಿ ? "

" ಆ ವಿಚಾರವನ್ನೆಲ್ಲ ನಾನು ಅರ್ಜಿಯಲ್ಲಿಯೇ ಬರೆದಿರುವೆನು. ಸರಿಯಾಗಿ ವಿದ್ಯಾಭ್ಯಾಸಮಾಡಲು ನನಗೆ ಅವಕಾಶ ದೊರೆಯಲಿಲ್ಲ. ವಿದ್ಯಾಭ್ಯಾಸಕ್ಕೋಸ್ಕರ ಬಹಳ ಕಷ್ಟಪಡಬೇಕಾಯಿತು. ಆದ್ದರಿಂದ ಪ್ರಥಮ ದರ್ಜೆಯಲ್ಲಿ ಸಾಧ್ಯವಾಗಲಿಲ್ಲ."

“ ನೀವು ವಿಜ್ಞಾನ ತೆಗೆದುಕೊಂಡಿದ್ದರ ಉದ್ದೇಶವೇನು ? ”

“ ಉದ್ದೇಶವೇನೂ ಇಲ್ಲ. ನನಗೆ ಸಾಹಿತ್ಯದಮೇಲೆ ತುಂಬಾ ಅಭಿರುಚಿ. ಸಾಹಿತ್ಯವನ್ನು ತೆಗೆದಕೊಂಡಿದ್ದರೆ ರ್‍ಯಾಂಕ್ ಬರುತ್ತಿತ್ತು. ಅದಕ್ಕೋಸ್ಕರ ಮೈಸೂರಿಗೆ ಹೋಗಿ ಹಣ ಖರ್ಚುಮಾಡಿ ಓದಲು ಆಗ ನನ್ನಲ್ಲಿ ಶಕ್ತಿ ಇರಲಿಲ್ಲ. ಆದ್ದರಿಂದ ವಿಜ್ಞಾನ ತೆಗೆದುಕೊಂಡೆ.”

ಭೇಟಿ ಕೊಟ್ಟಿರುವ ಮೂರನೆಯವ್ಯಕ್ತಿ : ಬಲಿಷ್ಠದ ಶರೀರ, ಬಾಡಿದ ಮುಖ, ಬೆಲೆಯುಳ್ಳ ಬಟ್ಟೆಗಳನ್ನು ಧರಿಸಿಕೊಂಡಿದ್ದ. ಆದರೆ ಉಡುಪು ಶರೀರಕ್ಕೆ ಸರಿಯಾಗಿ ಹೊಂದುಕೊಳ್ಳುತ್ತಿರಲಿಲ್ಲ. ಕೋಮಲವಾಗಿ ಬೆಳೆದ ದಂಟಿನಸೊಪ್ಪು ಬಿಸಿಲಿಗೆ ಬಾಡಿರುವಂತೆ ಅವನು ಕಂದಿದ್ದ. ಒಳಗೆ ಬಂದು ಕಮಿಟಿಯ ಸದಸ್ಯರಿಗೆ ನಮಸ್ಕಾರ ಮಾಡುವಾಗ ದೀನತೆ ಎದ್ದು ಕಾಣುತಿತ್ತು.

“ ಒಂದು ವಿಚಾರವನ್ನು ಅಧ್ಯಯನಮಾಡಲು ಹೊರಡುವ ವ್ಯಕ್ತಿಯಲ್ಲಿ ಇರಬೇಕಾದ ಅವಶ್ಯಕವಾದ ವಸ್ತುಗಳಾವುವು ? ” ಅವನಿಗೆ ಅಧ್ಯಕ್ಷರ ಮೊದಲ ಪ್ರಶ್ನೆ.

ತನಗಾಗಿಯೇ ಈ ಪ್ರಶ್ನೆಯನ್ನು ಅಧ್ಯಕ್ಷರು ಕೇಳಿರುವರೆಂದು ಸಂತೋಷಗೊಂಡು ಆತ ಹೇಳಿದ, ‘ಹಣ.’

“ ಹಣ ಮುಖ್ಯವಾದ ವಸ್ತುವಾಗಿರಬಹುದು. ಆದರೆ ಸರ್ವಸ್ವ ಅದೇ ಅಲ್ಲ. ನಮ್ಮಲ್ಲಿ ಅನೇಕಮಂದಿ ಶ್ರೀಮಂತರಿರುವರು. ಹಣ ಸೇರಿದ ಹಾಗೂ ವಿಚಾರಶಕ್ತಿ ಕಡಮೆಯಾಗುವುದೆಂದು ಅನೇಕರ ಭಾವನೆಯಲ್ಲಾ!” ಎಂದು ಎರಡನೆಯ ಸದಸ್ಯರು ಆತನ ಉತ್ತರದಲ್ಲಿ ಸಂಶಯವನ್ನೆತ್ತಿದರು.

ಅವನು ಯೋಚನೆ ಮಾಡುತ್ತಾ ಸುಮ್ಮನೆ ನಿಂತ.

ಸದಸ್ಯರು ಸ್ವಲ್ಪ ಹೊತ್ತು ನೋಡಿದರು. ತರುವಾಯ ಅಧ್ಯಕ್ಷರು ಕೇಳಿದರು, “ ಒಂದು ದೇಶದ ಉನ್ನತಿಗೆ ಕಾರಣಗಳು ಯಾವುವು.”

“ ಸಹಕಾರಸಂಘ, ಬ್ಯಾಂಕು, ಕೋರ್ಟುಕಛೇರಿಗಳು.”

“ ಹಾಗಾದರೆ ನಮ್ಮ ದೇಶ ಉನ್ನತಿಯಲ್ಲಿದೆ ಎಂದು ನಂಬುತೀರಾ ?”

“ ಹೌದು.”

“ ವ್ಯವಸಾಯ, ಕೈಗಾರಿಕೆಗಳಿಂದ ದೇಶಕ್ಕೆ ಪ್ರಯೋಜನವಿಲ್ಲವೆ?”

“ ವ್ಯವಸಾಯದಿಂದಲೇ ನಾವು ಬದುಕುವುದು. ಕೈಗಾರಿಕೆಯಿಂದ ನಮಗೆ ಬೇಕಾದ ವಸ್ತುಗಳನ್ನು ಮಾಡಿಕೊಳ್ಳಬಹುದು. ಆದ್ದರಿಂದ ಅವೆಲ್ಲಾ ಮುಖ್ಯವಾದುವು.”

“ ಹಾಗಾದರೆ ಇವು ಉನ್ನತಿಗೆ ಸಾಧನವಲ್ಲವೆ ?”

“ ವ್ಯವಸಾಯ, ಕೈಗಾರಿಕೆ ಆವಶ್ಯಕವಾದುವುಗಳು. ಸಹಕಾರಸಂಘ ಬ್ಯಾಂಕುಗಳು ಉನ್ನತಿಗೆ ಮಾರ್ಗಗಳು. ಆದ್ದರಿಂದಲೇ ನಮ್ಮ ತಂದೆ ಜೀವನ ಪರಿಯಂತ ಇವುಗಳಿಗಾಗಿ ದುಡಿದರು. ದೇಶದ ಉನ್ನತಿಯನ್ನೇ ರಾತ್ರಿ ಹಗಲು ಯೋಚಿಸುತ್ತಿದ್ದರು.”

“ ನೀವು ಯಾವುದಾದರೂ ಹಳ್ಳಿಗೆ ಹೋಗಿದ್ದೀರಾ ? ”

“ ನಮ್ಮ ತಂದೆ ಕೆಲಸದಮೇಲಿರುವಾಗ ಅವರೊಂದಿಗೆ ಸರ್ಕೀಟಿನ ಜೊತೆ ಹೋಗುತ್ತಿದೆ. ಅವರ ಅನೇಕ ಉಪನ್ಯಾಸಗಳನ್ನು ಕೇಳಿರುವೆನು.”

“ಅಡಕೆ ತೋಟದಲ್ಲಿ ಬಾಳೆಯನ್ನೂ, ಕಾಫಿ ತೋಟದಲ್ಲಿ ರಬ್ಬರ್ ಗಿಡಗಳನ್ನೂ ಬೆಳೆಸುವ ಕಾರಣವೇನು ? ”

“ ಒಂದೇಸಾರಿ ಎರಡು ಬೆಳೆಯನ್ನೂ ತೆಗೆಯುವ ಉದ್ದೇಶದಿಂದ. ನಮ್ಮ ತಂದೆ ಜನರಿಗೆ ಎರಡು ಮೂರು ತರದ ಪೈರನ್ನು ಒಟ್ಟಿಗೆ ಬೆಳೆಯಲು ಹೇಳುತ್ತಿದ್ದರು.”

ನಾಲ್ಕನೆಯವನು ನಮಗೆ ಚಿರಪರಿಚಿತನಾಗಿರುವ ದ್ಯಾವಪ್ಪ. ಉತ್ಸಾಹ ಆತನ ಅಂಗಾಂಗಗಳಲ್ಲಿ ಎದ್ದು ಕಾಣುತಿತ್ತು. ಮುಖದಮೇಲೆ ಕಾಂತಿ ಹೊಳೆಯುತಿತ್ತು. ಬಲಿಷ್ಠವಾದ ಶರೀರ. ಅದಕ್ಕೆ ಒಪ್ಪುವ ಗಾತ್ರ. ಅಧ್ಯಕ್ಷರೇ ಈತನಿಗೆ ಮೊದಲು ಪ್ರಶ್ನೆ ಹಾಕಿದರು, “ಒಂದು ವಿಚಾರವನ್ನು ಅಧ್ಯಯನ ಮಾಡಲು ಹೊರಡುವ ವ್ಯಕ್ತಿಯಲ್ಲಿ ಇರಬೇಕಾದ ಅವಶ್ಯಕ ವಸ್ತುಗಳಾವುವು ? ”

“ ಇಚ್ಛಾಶಕ್ತಿ, ಬುದ್ಧಿ, ಸಾಹಸ.”

“ ದೇಶದ ಉನ್ನತಿಗೆ ಕಾರಣಗಳು ಯಾವುವು ? ” ಎಂದು ಒಬ್ಬ ಸದಸ್ಯರು ನಗುತ್ತಾ ಕೇಳಿದರು.

"ಒಂದು ದೇಶದ ಉನ್ನತಿಗೆ ಆ ದೇಶದ ಆರೋಗ್ಯವಂತರೂ ಬಲಿಷ್ಠರೂ ಆದ ನಿವಾಸಿಗಳು ಮೂಲಕಾರಣ. ಎರಡನೆಯದು ಸೂರ್ಯ. ಮೂರನೆಯದು ಅಲ್ಲಿ ಹರಿಯುವ ನದಿ, ಬೀಳುವ ಮಳೆ, ಗುಡ್ಡ ಬೆಟ್ಟಗಳು ಮತ್ತು ಫಲವತ್ತಾದ ಮಣ್ಣು. ನಾಲ್ಕನೆಯದು ಭೂಮಿಯೊಳಗಿರುವ ಖನಿಜಸಂಪತ್ತು."

"ನೀವು ಹೇಳುವ ರೀತಿಯಲ್ಲಿ ಈ ಎಲ್ಲ ಸೌಭಾಗ್ಯವೂ ಹಿಂದೂಸ್ಥಾನಕ್ಕಿದ್ದರೂ ಅದು ಬಡತನದಲ್ಲಿ ಬೇಯುತಿದೆ. ಇಂಗ್ಲೆಂಡಿನಲ್ಲಿ ನೀವು ಹೇಳಿದ ಉನ್ನತಿಯ ಸಾಧನ ಅಷ್ಟಾಗಿಲ್ಲದಿದ್ದರೂ ಅದು ಸಮೃದ್ಧದೇಶವಾಗಿ ಉನ್ನತಿಯಲ್ಲಿದೆ."

"ಇಂಗ್ಲೆಂಡಿನ ಸಮೃದ್ಧಿ ಮತ್ತು ಉನ್ನತಿ ಶಾಶ್ವತವಾದ ಅಸ್ತಿಭಾರದಮೇಲೆ ನಿಂತಿದೆ ಎಂದು ಹೇಳಲು ಸಾಧ್ಯವಿಲ್ಲ. ಕೈಗಾರಿಕೆ, ವ್ಯಾಪಾರಗಳಿಂದ ಅದು ಸಮೃದ್ಧ ದೇಶವಾಗಿ ಉನ್ನತಿಗೆ ಬಂದಿದೆ. ರಾಜನೀತಿಯ ಸಹಾಯದಿಂದ ಕೈಗಾರಿಕೆ, ವ್ಯಾಪಾರ ನಡೆಯುತ್ತಿದೆ. ವ್ಯಾಪಾರದಿಂದ ಇಡೀ ಪ್ರಪಂಚವನ್ನು ಗೆಲ್ಲಬಹುದೆಂಬ ನಂಬಿಕೆ ಯೂರೋಪಿನ ಜನರಿಗೆ, ಅದರಲ್ಲಿಯೂ ಇಂಗ್ಲಿಷಿನವರಿಗೆ ತುಂಬಾ ಇದೆ. ಇದು ಸರಿಯಾದ ಸಿದ್ಧಾಂತವಲ್ಲ. ಅದಕ್ಕೆ ಯೂರೋಪಿನ ದೇಶಗಳ ಇತಿಹಾಸವೇ ಸಾಕ್ಷಿ. ರಾಜನೀತಿಯ ಕೈವಾಡ ಇಲ್ಲದಿದ್ದರೆ ವ್ಯಾಪಾರ ನಡೆಯುವುದಿಲ್ಲ. ಪ್ರಪಂಚದ ಇತರ ದೇಶಗಳು ಅಜ್ಞಾನದಲ್ಲಿದ್ದಾಗ ಅದು ಸಾಧ್ಯವಾಯಿತು. ಅದನ್ನೇ ಚಿರಸತ್ವವಾಗಿ ಒಪ್ಪುವಹಾಗಿಲ್ಲ.

"ಪ್ರತಿಯೊಂದು ದೇಶದ ಸಮೃದ್ಧಿಗೆ ವ್ಯವಸಾಯ, ಕೈಗಾರಿಕೆ ಮುಖ್ಯವಾದ ಅಂಶಗಳು. ತರುವಾಯ ಆ ದೇಶದಲ್ಲಿ ದೊರಕುವ ಖನಿಜ ಸಂಪತ್ತು. ಈ ವಿಚಾರದಲ್ಲಿ ಅಮೆರಿಕಾ ಸೌಭಾಗ್ಯಶಾಲಿಯಾದ ದೇಶ. ಅಲ್ಲಿ ಎಲ್ಲತರದ ಬೆಳೆ ಆಧುನಿಕ ರೀತಿಯಲ್ಲಿ ಬೆಳೆಯುತ್ತಾರೆ. ಅದರಿಂದ ಕಾರಖಾನೆಗಳಿಗೆ ಬೇಕಾದ ಕಚ್ಚಾಮಾಲು ದೊರೆಯುತ್ತದೆ. ಅದರಿಂದ ತಮಗೆ ಬೇಕಾದ ಕೈಗಾರಿಕೆಯನ್ನು ರೂಢಿಸಬಹುದು. ಅದೇ ರೀತಿ ರೂಢಿಸುತಿದಾರೆ."

"ಹಾಗಾದರೆ ಹಿಂದೂಸ್ಥಾನದ ಉನ್ನತಿಗೆ ಅವಕಾಶವಿದೆ ?"

" ಖಂಡಿತವಾಗಿಯೂ. ಅದು ಈಗ ಅವನತಿಯ ತಳದಲ್ಲಿದೆ. ವ್ಯವಸಾಯ, ಕೈಗಾರಿಕೆಗಳಿಂದ ಉನ್ನತಿಗೆ ತರಬಹುದು."

" ಅಧಿಕ ಲಾಭೋತ್ಪಾದನೆಗೆ ಕೈಗಾರಿಕೆ ಮುಖ್ಯವೇ? ವ್ಯವಸಾಯ ಮುಖ್ಯವೇ?

" ಆಧುನಿಕ ರೀತಿಯಲ್ಲಿ ವ್ಯವಸಾಯ ಮಾಡಿದರೂ ಉತ್ಪತ್ತಿಯಲ್ಲಿ ಒಂದು ಮಿತಿ ಇರುತ್ತದೆ. ಭಾರಿ ಕಾರಖಾನೆಗಳಲ್ಲಿ ಮಿತಿ ಇರುವುದಿಲ್ಲ. ಆದ್ದರಿಂದ ವ್ಯವಸಾಯಕ್ಕಿಂತಲೂ ಕೈಗಾರಿಕೆಯಲ್ಲಿ ಲಾಭ ಹೆಚ್ಚು ಸಂಪಾದಿಸಬಹುದು.''

" ಒಂದೇ ಕೆಲಸವನ್ನು ಒಬ್ಬನು ಮಾಡುತಿದ್ದರೆ ಅದರಲ್ಲಿ ನಿಪುಣತೆ ಸಂಪಾದಿಸಬಹುದು. ಕೆಲಸದಲ್ಲಿ ನಿಪುಣತೆ ಇದ್ದರೆ ನಾಜೂಕಾಗಿ ಅಧಿಕ ಪರಿಣಾಮದಲ್ಲಿ ಸಾಮಾನುಗಳನ್ನು ತಯಾರುಮಾಡಬಹುದು. ಆದರೆ ಮಹಾತ್ಮಾಗಾಂಧಿಯವರು ಎಲ್ಲರಿಗೂ ನೂಲಬೇಕೆಂದು ಹೇಳುತ್ತಾರೆ. ಇವು ಒಂದಕ್ಕೊಂದು ವಿರುದ್ಧವಲ್ಲವೇ?"

" ಇಲ್ಲ, ಒಂದಕ್ಕೊಂದು ಆಶ್ರಯರೂಪದಲ್ಲಿವೆ. ಮನುಷ್ಯನಿಗೆ ಅತ್ಯಾವಶ್ಯಕವಾಗಿ ಬೇಕಾದ ವಸ್ತುಗಳು : ಆಹಾರ, ಬಟ್ಟೆ, ಮನೆ, ಚಿಕಿತ್ಸೆ. ಈ ನಾಲ್ಕು ವಿಚಾರಗಳನ್ನು ಪ್ರತಿಯೊಬ್ಬನೂ ತಿಳಿದಿರಬೇಕು. ಬೇರೆಯವರ ಆಶ್ರಯದಲ್ಲಿ ಇರಬಾರದು. ಬೇರೆಯವರನ್ನು ನಂಬಿಕೊಂಡು ಕುಳಿತರೆ ನಮಗೆ ವಿಪತ್ತು ಖಂಡಿತ. ಇವುಗಳಲ್ಲಿ ನಿಪುಣತೆಯನ್ನು ಹೊಂದಿ ಅದನ್ನೇ ಉದ್ಯೋಗವನ್ನಾಗಿ ಮಾಡಿಕೊಳ್ಳುವವರ ಮಾತು ಬೇರೆ. ಆದರೆ ಪ್ರತಿಯೊಬ್ಬರೂ ಇವನ್ನು ತಿಳಿದಿರಬೇಕು.

" ಈಗ ನಮ್ಮ ರೈತರಿಗೆ ಇರುವ ತೊಂದರೆ ಏನು ? "

" ಮೊದಲನೆಯದು ಅವಿದ್ಯೆ. ಎರಡನೆಯದು ಬಡತನ. ಮೂರನೆಯದು ಲಾಭೋತ್ಪಾದಕ ರೀತಿಯಲ್ಲಿ ವ್ಯವಸಾಯ ಮಾಡದಿರುವುದು. ನಾಲ್ಕನೆಯದು ತಾವು ಬೆಳೆದ ಪದಾರ್ಥಗಳನ್ನು ಸರಿಯಾದ ಬೆಲೆಗೆ ಮಾರಲು ಮಾರುಕಟ್ಟೆ ಇಲ್ಲದಿರುವುದು. ಐದನೆಯದು ಸಾಲ, ವ್ಯಾಜ್ಯ. ಆರನೆಯದು ಜಮೀನು ಹಿಡುವಳಿ ಒಟ್ಟೊಟ್ಟಿಗೆ ಇಲ್ಲದಿರುವುದು.''

" ನೀವು ವಿದ್ಯೆಗೆ ಪ್ರಥಮಸ್ಥಾನ ಕೊಡಲು ಕಾರಣವೇನು ? "

“ ಮನುಷ್ಯನು ತಾನು ಮಾಡುವ ಕೆಲಸವನ್ನು ಚೆನ್ನಾಗಿ ತಿಳಿದಿರಬೇಕು. ಅದೇ ವಿದ್ಯೆ. ವಿದ್ಯೆಯಿಂದ ಮನುಷ್ಯರಲ್ಲಿ ವಿವೇಚನಾಶಕ್ತಿ ಬೆಳೆಯುತ್ತದೆ. ವಿವೇಚನಾಶಕ್ತಿ ಇಲ್ಲದಮೇಲೆ ಮನುಷ್ಯನಿಗೆ ಅವನತಿ ಪ್ರಾರಂಭವಾಗುವುದು.

“ ಶತಮಾನಗಳಿಂದ ನಮ್ಮ ವಂಶವು ವ್ಯವಸಾಯ ಮಾಡಿಕೊಂಡು ಬಂದಿದೆ. ನಾವು ಅಡಕೆ, ಭತ್ತ ಬೆಳೆಯುತ್ತೇವೆ. ನಾವು ಬೆಳೆದ ಭತ್ತ ನಮಗೆ ಸಾಲದು. ಅಡಕೆ ಮಾರುವುದರಿಂದ ಬರುವ ಹಣದಲ್ಲಿ ಬಟ್ಟೆ, ಕಂದಾಯ ಇತ್ಯಾದಿಗಳ ಖರ್ಚು ಕಳೆಯುತ್ತದೆ. ಕಬ್ಬನ್ನು ಕೂಡಾ ಬೆಳೆಯುತ್ತೇವೆ. ಅದರಿಂದ ಬರುವ ಆದಾಯಕ್ಕಿಂತ ಖರ್ಚು ಹೆಚ್ಚು. ಸ್ವಂತ ಹಿಡುವಳಿದಾರರಾದ ನಮ್ಮ ಸ್ಥಿತಿಯೇ ಹೀಗಿರುವಾಗ ನಮ್ಮ ಕೈಯಲ್ಲಿ ಕೆಲಸಮಾಡುತಿರುವ ಕೂಲಿಯವರ, ಗುತ್ತಿಗೇದಾರರ ಸ್ಥಿತಿ ಅವರ್ಣನೀಯವಾದ್ದು. ಹಾಗಿದ್ದಮೇಲೆ ಅಂಥ ಕೆಲಸವನ್ನು ಅವರು ಏಕೆ ಮಾಡುವರು? ಅವರ ಜೀವನ ಹೇಗೆ ನಡೆಯುವುದು? ಎಂದು ಕೇಳಬಹುದು. ಅವರಿಗೆ ಜೀವನಕ್ಕೆ ಗೊತ್ತಿರುವ ಮಾರ್ಗ ಅದೊಂದೇ. ಅದನ್ನು ಬಿಟ್ಟರೆ ಸಾಯಲೇ ಬೇಕಾಗುತ್ತದೆ. ಆದ್ದರಿಂದ ಸಾಯದ ರೀತಿಯಲ್ಲಿ ವ್ಯವಸಾಯವನ್ನು ಮಾಡಿಕೊಂಡು ಬದುಕಿರುವರು.

“ ಹೀಗೆ ವಿಚಾರಮಾಡುವ ಶಕ್ತಿಯೂ, ನಿಮ್ಮ ಮುಂದೆ ಅದನ್ನು ಹೇಳುವ ಧೈರ್ಯವೂ ವಿದ್ಯೆಯಿಂದ ನನಗೆ ಬಂತು. ರೈತರಿಗೆ ವಿದ್ಯೆ ಮುಖ್ಯವಾದ್ದು. ವಿದ್ಯೆ ಬಲ್ಲ ರೈತ ಎಂಥ ವಿಪತ್ತಿನಲ್ಲಾಗಲಿ ಜೀವಿಸಬಲ್ಲ. ಹೊಸ ಹೊಸ ರೀತಿಯಲ್ಲಿ ವ್ಯವಸಾಯಮಾಡಲು ಶಕ್ತನಾಗುವನು. ನಾನು ಅಲ್ಪ ಸ್ವಲ್ಪ ವಿದ್ಯಾವಂತನಾದ್ದರಿಂದ ಇಷ್ಟೆಲ್ಲ ಯೋಚಿಸಲು ಸಾಧ್ಯವಾಯಿತು.”

---

# ೧೮. ನಿಜವಾದ ಓದು.

ವಿದೇಶದವರು ಕೈಗಾರಿಕೆ ಕಾರಖಾನೆಗಳ ರಹಸ್ಯವನ್ನು ಕಲಿಸಿ ಕೊಡುವುದಿಲ್ಲ. ಹಿಂದೂಸ್ಥಾನದಿಂದ ಹೋಗುವ ವಿದ್ಯಾರ್ಥಿಗಳಿಗೆ ಸಾಧಾರಣವಾದ ತಿಳಿವಳಿಕೆಯನ್ನು ಕೊಟ್ಟು ಕಳುಹಿಸಿಕೊಡುತ್ತಾರೆ. ಸಾಹಸ ಬುದ್ಧಿವಂತಿಕೆಯಿಂದ ಆದಷ್ಟು ವಿಚಾರಗಳನ್ನು ತಿಳಿದುಕೊಂಡು ಬರುವಂಥ ವ್ಯಕ್ತಿಯನ್ನು ಕಳುಹಿಸುವ ಅಭಿಪ್ರಾಯ ಸರಕಾರಕ್ಕಿತ್ತು. ಎಲ್ಲ ಅರ್ಜಿದಾರರಲ್ಲಿಯೂ ಭೇಟಿಗೆ ಕರೆಯಿಸಿದ ನಾಲ್ಕು ವ್ಯಕ್ತಿಗಳಲ್ಲಿ ದ್ಯಾವಪ್ಪನೇ ಯೋಗ್ಯನೆಂದು ಕಮಿಟಿಯವರು ಸರಕಾರಕ್ಕೆ ಸಿಫಾರಸು ಮಾಡಿದರು.

ಕಮಿಟಿಯ ಸಿಫಾರಸ್ಸನ್ನು ಸರಕಾರ ಒಪ್ಪಿತು. ಮುಖ್ಯಮಂತ್ರಿಗಳು ದ್ಯಾವಪ್ಪನನ್ನು ಕರೆಯಿಸಿದರು. ದ್ಯಾವಪ್ಪನನ್ನು ನೋಡಿ ಅವರಿಗೂ ತುಂಬಾ ಸಂತೋಷವಾಯಿತು. ಅವನಿಗೆ ಹಸ್ತಲಾಘವ ಮಾಡುತ್ತಾ ಹೇಳಿದರು, “ಹೊನ್ನುಗದ್ದೆ ದ್ಯಾವಪ್ಪನವರೇ, ಸಮಿತಿಯವರು ನಿಮ್ಮ ವಿದ್ಯಾ, ಬುದ್ಧಿ, ಸಾಹಸಗಳನ್ನು ನೋಡಿ ಸಂತೋಷಪಟ್ಟು ಪರದೇಶದಲ್ಲಿ ವಿದ್ಯಾಭ್ಯಾಸಕ್ಕಾಗಿ ನಿಮ್ಮನ್ನು ಸಿಫಾರಸ್ ಮಾಡಿದ್ದಾರೆ. ಸರಕಾರವೂ ದೇಶವೂ ನಿಮ್ಮಲ್ಲಿ ತುಂಬಾ ಆಶೆಯನ್ನಿಟ್ಟಿವೆ. ಕೈಗಾರಿಕೆಗೆ ಕಾರಖಾನೆಗೆ ಬೇಕಾದ ಎಲ್ಲ ಜ್ಞಾನವನ್ನು ಬುದ್ಧಿವಂತಿಕೆಯಿಂದಲೂ ಸಾಹಸದಿಂದಲೂ ತಿಳಿದುಕೊಂಡು ಬರುವಿರೆಂದು ನಂಬಿದ್ದೇವೆ.”

“ಶ್ರದ್ಧೆ, ಉತ್ಸಾಹ, ಸಂಕಲ್ಪಗಳಿಂದ ಹಾಗಾಗಲು ಶ್ರಮಿಸುವೆನೆಂದು ನಿಮಗೆ ಭರವಸೆ ಕೊಡಬಲ್ಲೆ” ಎಂದು ದ್ಯಾವಪ್ಪ ವಿನಯದಿಂದ ಹೇಳಿದ.

ಮುಖ್ಯಮಂತ್ರಿ ಮತ್ತೆ ಹಸ್ತಲಾಘವ ಮಾಡಿ ಸಂತೋಷದಿಂ ದ್ಯಾವಪ್ಪನನ್ನು ಬೀಳ್ಕೊಟ್ಟರು.



ವಿಷಯ ಸಂಗ್ರಹ ಮಾಡಲು ವಿದ್ಯಾರ್ಥಿಗಳಿಗೆ ಹೆದ್ದಾರಿ

# ಪ್ರಚಾರ ಸಾಹಿತ್ಯ



ಪ್ರಕಾಶಕರು :
**ಮಾಧವ ಸನ್ಸ್,**
ಬೆಂಗಳೂರು

ಸಂಪಾದಕರು :
**ಡಿ. ವಿ. ಕೆ. ಮೂರ್ತಿ,**
ಬಿ.ಎ. (ಆನರ್ಸ್)

## ಉದ್ದೇಶ

ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ವೈಜ್ಞಾನಿಕ ವಿಷಯಗಳನ್ನು ಲಲಿತಶೈಲಿಯಲ್ಲಿ ಪ್ರಕಟಿಸಿ ವಿಚಾರ ಜಾಗೃತಿಯನ್ನುಂಟುಮಾಡುವುದು.

**ಈಗಾಗಲೆ ಪ್ರಕಟವಾಗಿರುವ ಪುಸ್ತಕಗಳು**

೧. **ಭಾರತದ ವ್ಯಾಪಾರ** (ಜನವರಿ) ಶ್ರೀ. ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

೨. **ಭಾರತದ ರಾಜ್ಯಾಂಗ ರಚನೆ** (ಫೆಬ್ರವರಿ-ಮಾರ್ಚಿ) ಶ್ರೀ. ವಿ. ಸೀತಾರಾಮಯ್ಯ, ಎಂ.ಎ.

೩. **ಜೀವ? ಎಂದರೇನು** (ಏಪ್ರಿಲ್) ಶ್ರೀ ಪಿ. ಶ್ರೀನಿವಾಸರಾವ್, ಎಂ.ಎಸ್ಸಿ.

## ಬರಲಿವೆ

ಭಾರತದ ವ್ಯವಸಾಯ, ಅಕ್ಷರಸ್ಥ ಭಾರತ, ಭಾರತದ ಕೈಗಾರಿಕೆಗಳು, [illegible] ವ ಜನತೆ, ನಮ್ಮ ಸಾಮಾಜಿಕ ಸಮಸ್ಯೆಗಳು—ಇವೇ ಮುಂತಾದುವು.

ಎಲ್ಲ ಪುಸ್ತಕಗಳೂ ಸರಳ, ಸರಸ ಶೈಲಿಯಲ್ಲಿ ಪಂಡಿತರುಗಳಿಂದ ಬರೆಯಲ್ಪಡುವುವು.

**ವರ್ಷಕ್ಕೆ ೧೨ ಪುಸ್ತಕಗಳು** **ವಾರ್ಷಿಕ ಚಂದಾ ೬ ರೂ**

ಇಂದೇ ಪ್ರಚಾರ ಸಾಹಿತ್ಯಕ್ಕೆ ಚಂದಾದಾರರಾಗಿ.

ಆನಂದ್ ಬ್ರದರ್ಸ್

**ಮೈಸೂರು ಬ್ಯಾಂಕ್ ಬಿಲ್ಡಿಂಗ್ಸ್, ಅವೆನ್ಯೂ ರೋಡ್**

**ಬೆಂಗಳೂರು ನಗರ**